# ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ

(೨೦೧೩-೧೪ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಬಂಧ)


ಸಂಶೋಧಕರು

ವಿರುಪಾಕ್ಷಪ್ಪ.ಎಂ

ನೋಂದಣಿ ಸಂಖ್ಯೆ : ೧೩೦೧೧೦೪೦೩೦೦೧೨

ಮಾರ್ಗದರ್ಶಕರು

ಡಾ. ಸಿ. ಮಹದೇವ

ಪ್ರಾಧ್ಯಾಪಕರು





ಸಮಾಜ ವಿಜ್ಞಾನಗಳ ನಿಕಾಯ

ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬


೨೦೧೩-೧೪

# ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ

(೨೦೧೭ – ೧೮ನೇ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪ್ರಬಂಧ)



ಸಂಶೋಧಕರು
**ವಿರುಪಾಕ್ಷಪ್ಪ.ಎಂ**
ನೋಂದಣಿ ಸಂಖ್ಯೆ : ೧೭೦೧೦೮೦೩೦೦೧೨

ಮಾರ್ಗದರ್ಶಕರು
**ಡಾ. ಸಿ. ಮಹದೇವ**
ಪ್ರಾಧ್ಯಾಪಕರು



ಸಮಾಜ ವಿಜ್ಞಾನಗಳ ನಿಕಾಯ
**ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗ**
**ಕನ್ನಡ ವಿಶ್ವವಿದ್ಯಾಲಯ ಹಂಪಿ,**
ವಿದ್ಯಾರಣ್ಯ – ೫೮೩ ೨೭೬
೨೦೧೭ – ೧೮

## ಮಾರ್ಗದರ್ಶಕರ ದೃಢೀಕರಣ ಪತ್ರ

**ವಿರೂಪಾಕ್ಷಪ್ಪ ಎಂ ಅವರು "ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಸಂಪ್ರಬಂಧವನ್ನು ಸಲ್ಲಿಸಿರುತ್ತಾರೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರು
(ಡಾ. ಸಿ. ಮಹದೇವ)
ಪ್ರಾಧ್ಯಾಪಕರು
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೪|೦೪|೨೦೧೮

## ಸಂಶೋಧಕರ ಪ್ರಮಾಣ ಪತ್ರ

**ವಿರೂಪಾಕ್ಷಪ್ಪ** ಎಂ ಅವರು **"ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ"** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಪ್ರಾಧ್ಯಾಪಕರಾದ **ಡಾ. ಸಿ ಮಹದೇವ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಈ ಸಂಪ್ರಬಂಧವನ್ನು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಅಧ್ಯಯನದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: ೨೪/೦೪/೨೦೧೪

(ವಿರೂಪಾಕ್ಷಪ್ಪ. ಎಂ)
ಸಂಶೋಧನ ವಿದ್ಯಾರ್ಥಿ
ಪ್ರಾಚೀನ ಇತಿಹಾಸ ಮತ್ತು ಪುರಾತತ್ವ
ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಕಾನಾಹೊಸಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ

# ಅಧ್ಯಾಯ: ಒಂದು

## ಪ್ರಸ್ತಾವನೆ

ಇತಿಹಾಸವು ಬೌದ್ಧಿಕ, ಭೌಗೋಳಿಕ, ಜ್ಞಾನಾತ್ಮಕ, ಸಂಜೀವಿನಿ ಎಂದರೆ ಅದು ಅತಿಶಯೋಕ್ತಿಯಲ್ಲ. ಅದು ಉಳ್ಳವರ ಇತಿಹಾಸದ ಕಥೆಯಲ್ಲ. ಚರಿತ್ರೆ ಎಂಬುದು ಕಟ್ಟಕಡೆಯ ದೇಶಿ ಸೊಗಡಿನ ತಾಯಿ ಬೇರುಗಳ ಮೂಲನೆಲೆ. ಮಾನವನ ಚರಿತ್ರೆಯು ತುಂಬಾ ಪ್ರಾಚೀನವಾದದು. ಪ್ರಾಚೀನ ಕಾಲದಿಂದ ಅರ್ವಾಚಿನ ಕಾಲದವರೆಗೆ ನೋಡಿದಾಗ ಮಾನವನು ಸಾಗಿಬಂದ ಹಂತಗಳು ಅಗಾಧವಾದವು. ಕಾಲಾಂತರದುದ್ದಕ್ಕೂ ಮನುಷ್ಯ ತನ್ನದೇ ಆದ ಸಂಸ್ಕೃತಿಯ ವಿಕಾಸವನ್ನು ಕಂಡುಕೊಳ್ಳುತ್ತ ಬಂದಿದ್ದಾನೆ. ಅವನ ಚರಿತ್ರೆಯ ಪಳೆಯುಳಿಕೆಗಳು ನಾನಾ ಮುಖಗಳಲ್ಲಿ ಹರಿದು ಹಂಚಿಹೋಗಿವೆ. ಹೀಗೆ ಹರಿದು ಹಂಚಿಹೋದ ಕುರುಹುಗಳನ್ನು ಒಂದೆಡೆ ಸೇರಿಸಿದರೆ ಆಯಾ ಕಾಲದ ಸಾಂಸ್ಕೃತಿಕ ಚರಿತ್ರೆ ಕಾಣಸಿಗುತ್ತದೆ. ಒಂದು ಪ್ರದೇಶದ ವಿಶಿಷ್ಟ ಸಾಂಸ್ಕೃತಿಕ ಚರಿತ್ರೆಯನ್ನರಿಯುವ ಕಾರ್ಯ ಒಂದು ಹೊಸ ಆಯಾಮವನ್ನು ಸೃಷ್ಟಿಸಿಕೊಡಬಲ್ಲದು. ಸಮಾಜ ಜೀವಂತವಾಗಿರಲು ಪ್ರಜೆಗಳು ಪ್ರಜ್ಞಾವಂತರಾಗಲು ಸಾಂಸ್ಕೃತಿಕ ಅಧ್ಯಯನದ ಪಾಠ ಅವಶ್ಯಕವಾಗಿದೆ. ಮನುಷ್ಯನ ಹುಟ್ಟು, ಬೆಳವಣಿಗೆಯ ಮೊದಲ ಪಾಠದ ನೋಟ, ಶಿಲಾ ಸಂಸ್ಕೃತಿಗಳ ನೆಲೆಯಿಂದ ನಾಗರಿಕತೆಯೆಡೆಗೆ ಪ್ರಯಾಣಿಸಿದ ಪರಿ, ನಂತರ ತನ್ನ ಜೀವನದ ಸ್ಥಿತ್ಯಂತರದಲ್ಲಿ ಸಂಸ್ಕೃತಿ ವಿಕಾಸನದ ಎಲ್ಲವೂ ವ್ಯಕ್ತಿಜ್ಞಾನ ಪರಿಪಕ್ವತೆಗೆ ಹಿಡಿದ ಕನ್ನಡಿಯಾಗಿದೆ.

ಒಂದು ನಾಡು ಎಂದರೆ ಅಲ್ಲಿ ಆಳ್ವಿಕೆ ಮಾಡಿದ ಅರಸರಷ್ಟೆ ಅಲ್ಲ, ಅಲ್ಲಿನ ಮೂಲ ಕೇಂದ್ರ ಬಿಂದುಗಳಾದ ಜನ, ಆ ಪ್ರದೇಶದಲ್ಲಿ ಬಾಳಿ ಬದುಕಿದವರ ಅಧ್ಯಯನ. ಒಂದು ನಾಡಿನ ಅಥವಾ ದೇಶದ ನಿಜವಾದ ಇತಿಹಾಸವೆಂದರೆ ಅದು ಜನತೆಯ ಇತಿಹಾಸ. ಅವರು ಬದುಕಿದ ರೀತಿ, ಅನುಸರಿಸಿದ ಧರ್ಮ, ಅವರು ಕಟ್ಟಿದ ಕಲೆ, ಅವರ ಜೀವನಪದ್ಧತಿ, ಅವರ ನೀತಿ, ಮೌಲ್ಯಗಳು, ಸಮಸ್ಯೆಗಳ ವಿವರಣೆಯೇ ಆಗಿದೆ. ನಿರ್ದಿಷ್ಟವಾದ ಒಂದು ದೇಶದ ಇತಿಹಾಸ ತಿಳಿಯಲು ಸಾಹಿತ್ಯ, ಚರಿತ್ರೆ, ಸಂಸ್ಕೃತಿ, ದೇವಾಲಯ, ಸ್ಮಾರಕಗಳು, ಶಿಲಾಶಾಸನಗಳು, ಪ್ರಮುಖ ಪಾತ್ರವಹಿಸುತ್ತವೆ. ಅಧ್ಯಯನಕಾರರು ಇತಿಹಾಸವನ್ನು ಕೇವಲ ಒಂದು ಪ್ರದೇಶವನ್ನಾಳಿದ ರಾಜಮನೆತನಗಳ ಜೀವನಸಾಧನೆಗಳನ್ನು ಮಾತ್ರ ಎತ್ತಿ ಹಿಡಿಯುತ್ತದೆ. ಆದರೆ ಇಲ್ಲಿ ವಾಸಿಸಿದ ಸಾಮಾನ್ಯ ಜನರ ಸಾಂಸ್ಕೃತಿಕ ಇತಿಹಾಸವನ್ನು ರಚಿಸುವ ಕಡೆಗೆ ಅಧ್ಯಯನವನ್ನು ವಿಸ್ತಾರಗೊಳಿಸಬೇಕಾಗಿರುವುದು ಈಗಿನ ಅಧ್ಯಯನದ ಗುರಿಯಾಗಿದೆ.

ಪ್ರಸ್ತುತ ಸಂದರ್ಭದಲ್ಲಿ ಅಧ್ಯಯನದ ನೆಲೆಗಳು ಸ್ಥಳೀಯ ಚರಿತ್ರೆಯ ಹಿನ್ನೆಲೆಯಲ್ಲಿ ವಿಸ್ತಾರಗೊಳ್ಳುತ್ತವೆ. ಈ ರೀತಿಯ ಅಧ್ಯಯನದ ನೆಲೆಗಳಿಂದ ಒಂದು ಪ್ರದೇಶದ ಸಾಂಸ್ಕೃತಿಕ ಮಹತ್ವವನ್ನು ವಿಸ್ತಾರಗೊಳಿಸುವುದರ ಜೊತೆಗೆ ಸ್ಥಳೀಯ ಅನನ್ಯತೆಯನ್ನು ಗುರುತಿಸುವಲ್ಲಿ ಚರಿತ್ರೆಯ ಅಧ್ಯಯನ ಬಹಳ ಮಹತ್ವವಾದದು. ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ ಎಂಬ ಶೀರ್ಷಿಕೆ ಅಡಿಯಲ್ಲಿ ಸ್ಥಳೀಯವಾಗಿ ಲಭ್ಯವಿರುವ ಆಕರಗಳು, ಮೌಖಿಕ ಮತ್ತು ಚಾರಿತ್ರಿಕ ಹಿನ್ನೆಲೆಯ ಪ್ರಾಚ್ಯಾವಶೇಶಗಳ ಅಡಿಯಲ್ಲಿ ಈ ಗ್ರಾಮದ ಸಾಂಸ್ಕೃತಿಕ ಚರಿತ್ರೆ ಕಟ್ಟಿಕೊಡುವುದು ಅಧ್ಯಯನದ ಅವಶ್ಯಕತೆಯಾಗಿದೆ.

ಕಾನಾಹೊಸಹಳ್ಳಿ ಗ್ರಾಮದ ಪರಿಸರದಲ್ಲಿರುವ ಪ್ರಸ್ತುತ ಅಧ್ಯಯನದ ಪ್ರದೇಶವು ನೊಳಂಬವಾಡಿಯ ಕೋಗಳಿ ನಾಡು೫೦೦ ವಿಭಾಗಕ್ಕೆ ಒಳಪಟ್ಟಿರುವ ಕೂಡ್ಲಿಗಿ ತಾಲ್ಲೂಕಿನಲ್ಲಿದೆ. ಸ್ಥಳಿಯ ಆಚರಣೆಗಳು. ದೇವಾಲಯಗಳು, ಕೆರೆಕಟ್ಟೆಗಳು, ಕೋಟೆಕೊತ್ತಲಗಳು ಹಾಗೂ ಸ್ಮಾರಕಗಳು, ಜೊತೆಗೆ ಮೌಖಿಕ ಆಕರಗಳನ್ನು ಕಲೆಹಾಕುವ ಮೂಲಕ ಗ್ರಾಮದ ಸಾಂಸ್ಕೃತಿಕ ಅಧ್ಯಯನ ಕಟ್ಟಿಕೊಡುವ ಪ್ರಯತ್ನ ಮಾಡಲಾಗಿದೆ.

## ೧.೧ ಅಧ್ಯಯನದ ಉದ್ದೇಶ

ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶ ಈ ಗ್ರಾಮದ ಒಟ್ಟಾರೆ ಸಾಂಸ್ಕೃತಿಕ ಸಂಗತಿಗಳನ್ನು ವ್ಯವಸ್ಥಿತವಾಗಿ ಕಟ್ಟಿಕೊಡುವ ಹಾಗೂ ಲಭ್ಯವಿರುವ ಆಧಾರಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುವುದಾಗಿದೆ. ಇದುವರೆಗೆ ಈ ಗ್ರಾಮವನ್ನು ಕುರಿತು ಸಮಗ್ರವಾಗಿ ಸಂಶೋಧನಾತ್ಮಕ ಅಧ್ಯಯನಗಳು ನಡೆದಿಲ್ಲ. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನ ಕೈಗೊಳ್ಳಲಾಗಿದೆ. ಸ್ಥಳಿಯ ಅಧ್ಯಯನಗಳು ಹೆಚ್ಚು ಮಹತ್ವ ಪಡೆದುಕೊಳ್ಳುತ್ತವೆ. ಇದರಿಂದ ಪ್ರಾದೇಶಿಕ ಇತಿಹಾಸ ರಚನೆಗೆ ಅನುಕೂಲವಾಗುತ್ತದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ವಿಷಯಕ್ಕೆ ಪೂರಕವಾಗಿ ಗ್ರಾಮದಲ್ಲಿರುವ ಪುರಾತತ್ವ ಆಕರಗಳನ್ನು ಸಂಗ್ರಹಿಸಿ ಹಾಗೂ ವಿಶ್ಲೇಷಣೆಯ ಮೂಲಕ ಸ್ಥಳಿಯ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಈ ಪ್ರದೇಶದಲ್ಲಿ ಈವರೆಗೆ ನಡೆದಿರುವ ಅಧ್ಯಯನದ ಜೊತೆಗೆ ಕ್ಷೇತ್ರಕಾರ್ಯ ಕೈಗೊಂಡು ಸಂದರ್ಶನಗಳ ಮೂಲಕ ಪ್ರಚಲಿತವಾಗಿರುವ ಐತಿಹ್ಯ ಮತ್ತು ಮೌಖಿಕ ಕಥನಗಳನ್ನು ದಾಖಲಿಸಿಕೊಳ್ಳಲಾಗಿದೆ. ಅಲ್ಲದೆ ಪ್ರಸ್ತುತ ಸಂಗ್ರಹಿತ ಸಂಪನ್ಮೂಲ ವ್ಯಕ್ತಿಗಳ ಮೂಲಕ ಸಮಗ್ರ ಚರಿತ್ರೆಯನ್ನು ಕಟ್ಟಿಕೊಡಲು ಪ್ರಯತ್ನವನ್ನು ಪ್ರಸ್ತುತ ಸಂಪ್ರಬಂಧದಲ್ಲಿ ಮಾಡಲಾಗಿದೆ.

## ೧.೨ ಅಧ್ಯಯನದ ವ್ಯಾಪ್ತಿ

ಯಾವುದೇ ಸಂಶೋಧನೆಗೆ ಅಧ್ಯಯನದ ವ್ಯಾಪ್ತಿ ಬಹಳ ಮುಖ್ಯವಾಗಿದೆ. ನಿರ್ದಿಷ್ಟ ಹಾಗೂ ಉದ್ದೇಶಪೂರಿತ ಸಂಶೋಧನೆಯ ಯಶಸ್ವಿಗೆ ಇದು ತುಂಬಾ ಸಹಾಯಕವಾಗಿರುತ್ತದೆ. ಹಾಗಾಗಿ ಪ್ರಸ್ತುತ ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನದ ವ್ಯಾಪ್ತಿಯನ್ನು ಭೌಗೋಳಿಕವಾಗಿ ಕಾನಾಹೊಸಹಳ್ಳಿ ಗ್ರಾಮವನ್ನು ಮಾತ್ರ ಆಧ್ಯಯನಕ್ಕೆ ಹೆಚ್ಚಾಗಿ ಬಳಸಿಕೊಳ್ಳಲಾಗಿದೆ. ಅದರ ವ್ಯಾಪ್ತಿಯನ್ನು ಕಾನಾಹೊಸಹಳ್ಳಿ ಗ್ರಾಮಕ್ಕೆ ಮಾತ್ರ ಸಿಮೀತಗೊಳಿಸಲಾಗಿದೆ. ವಿಷಯಕ್ಕೆ ಪೂರಕ ಮಾಹಿತಿಗಳ ಅವಶ್ಯಕತೆಯೆಂದು ಕಂಡುಬಂದಲ್ಲಿ ಇನ್ನಿತರ ಪ್ರದೇಶದ ವಿವರಗಳನ್ನು ಸಹ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಾಚೀನ ಕಾಲದಿಂದ ಇಂದಿನವರೆಗೂ ಅಧ್ಯಯನವನ್ನು ಕೈಗೊಂಡು ಒಂದು ಗ್ರಾಮವನ್ನು ಕುರಿತು ದೀರ್ಘಕಾಲಾವಧಿಯ ಅಧ್ಯಯನ ಮಾಡುವ ಪ್ರಯತ್ನ ಇಲ್ಲಿಯದು.

## ೧.೩. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯ ವಿಧಾನವನ್ನು ವಿಶೇಷವಾಗಿ ಬಳಸಿಕೊಳ್ಳಲಾಗಿದೆ. ಕಾನಾಹೊಸಹಳ್ಳಿ ಗ್ರಾಮಕ್ಕೆ ನೇರವಾಗಿ ಭೇಟಿ ಮಾಡಿ, ಅಲ್ಲಿ ದೊರೆತಿರುವ ಐತಿಹಾಸಿಕ ಮತ್ತು ಸಾಹಿತ್ಯಿಕ ಆಕರಗಳನ್ನು ದಾಖಲಿಸಿಕೊಳ್ಳುವುದರ ಜತೆಗೆ ಮೌಖಿಕ ಕಥನಗಳನ್ನು ಹಾಗೂ ಐತಿಹ್ಯಗಳನ್ನು ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳೊಂದಿಗೆ ಚರ್ಚಿಸಿ ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಪೂರಕವಾಗಿ ದೊರೆತಿರುವ

ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪ್ರಚಲಿತದಲ್ಲಿರುವ ಇತಿಹಾಸ ಮತ್ತು ಸಾಂಸ್ಕೃತಿಕ ಅಧ್ಯಯನದ ವಿಧಾನಗಳನ್ನು ಅಳವಡಿಸಿಕೊಂಡು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಆಕರಗಳನ್ನು ವಿಷಯಾನುಸಾರ ವಿಶ್ಲೇಷಿಸಿ, ಚರ್ಚಿಸಿ ಫಲಿತಾಂಶಗಳನ್ನು ಕಂಡುಕೊಳ್ಳಲಾಗಿದೆ. ವೈಜ್ಞಾನಿಕವಾಗಿ ಮತ್ತು ವಸ್ತುನಿಷ್ಠವಾದ ವಿಧಾನಗಳನ್ನು ಈ ಸಂಪ್ರಬಂಧದ ರಚನೆಯಲ್ಲಿ ಪ್ರಾಮಾಣಿಕವಾಗಿ ಕಟ್ಟಿಕೊಡಲು ಪ್ರಯತ್ನಿಸಲಾಗಿದೆ. ಕೊನೆಯಲ್ಲಿ ಗ್ರಂಥಋಣ, ನಕ್ಷೆಗಳು, ಛಾಯಾಚಿತ್ರಗಳ ವಿವರಗಳನ್ನು ನೀಡಲಾಗಿದೆ.

## ೧.೪ ಅಧ್ಯಯನದ ಸಮೀಕ್ಷೆ

ಈವರೆಗೆ ಕಾನಾಹೊಸಹಳ್ಳಿಯನ್ನು ಒಳಗೊಂಡಂತೆ ಕೂಡ್ಲಿಗಿ ತಾಲೂಕಿನ ಬಗ್ಗೆ ಪೂರ್ಣ ಪ್ರಮಾಣದಲ್ಲಿ ವ್ಯವಸ್ಥಿತ ಅಧ್ಯಯನಗಳು ನಡೆದುಬಂದಿರುವುದು ತೀರಾವಿರಳ. ಆದರೆ ಈ ಪರಿಸರದ ಕುರಿತಾಗಿ ಕೆಲ ವಿಚಾರಗಳ ಬಗ್ಗೆ ಬಿಡಿ ಬಿಡಿಯಾಗಿ ಅಲ್ಲಲ್ಲಿ ನಡೆದಿರುವ ಅಧ್ಯಯನಗಳು ಕಾಣಸಿಗುತ್ತವೆ. ಅವು ಈ ಕೆಳಗಿನಂತಿವೆ.

ಫೂಟ್ ಆರ್.ಬಿ. ಇವರು ೧೯೧೯ರಲ್ಲಿ "ಮದ್ರಾಸಿನ ಇಂಡಿಯನ್ ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೊ ಹಿಸ್ಟಾರಿಕ್ ಆಂಟಿಕ್ವಿಟಿಸ್" ಎಂಬ ವರದಿಯಲ್ಲಿ ಕೂಡ್ಲಿಗಿ ತಾಲೂಕಿನ ಪೂರ್ವ ಇತಿಹಾಸವನ್ನು ಕುರಿತಂತೆ ಕೆಲವು ಸ್ಥಳಗಳನ್ನು ನವ ಶಿಲಾಯುಗದ ನೆಲೆಗಳೆಂದು ಗುರುತಿಸಿರುತ್ತಾರೆ. ಬಿ.ಎಂ. ಚಂದ್ರಶೇಖರಯ್ಯನವರು ೧೯೮೮ರಲ್ಲಿ "ಕೂಡ್ಲಿಗಿ ತಾಲೂಕು ದರ್ಶನ" ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲೂಕಿನ ಭೌಗೋಳಿಕತೆ ಮತ್ತು ಇಲ್ಲಿನ ಪ್ರೇಕ್ಷಣಿಯ ಸ್ಥಳಗಳನ್ನು ಕುರಿತು ಸಂಕ್ಷಿಪ್ತ ಮಾಹಿತಿಯನ್ನು ನೀಡಿರುತ್ತಾರೆ. ತಿಪ್ಪೇಸ್ವಾಮಿ ಹೆಚ್. ಇವರು ತಮ್ಮ ಲೇಖನವಾದ 'ಕೂಡ್ಲಿಗಿ ತಾಲೂಕಿನ ಅಪರೂಪದ ಮಾನವಾಕೃತಿಗಳು' ಎಂಬುವುದರಲ್ಲಿ ತಾಲೂಕಿನಲ್ಲಿ ಕಂಡುಬರುವ ಶಿಲಾ ಗೋರಿಗಳನ್ನು ಪತ್ತೆ ಹಚ್ಚಿ ಅವು ಭಾರತದಲ್ಲಿಯೇ ದೊರೆತಂತಹ ಅಪರೂಪದ ಮಾನವಾಕೃತಿಗಳೆಂದು ಹಾಗೂ ಅವುಗಳ ಬಗ್ಗೆ ಇರುವ ಐತಿಹ್ಯಗಳನ್ನು ಮೌಖಿಕ ಕಥನವನ್ನು ವಿವರಿಸಿರುತ್ತಾರೆ. ರವಿಕುಮಾರ್ ಎನ್.ಎಂ. ಮತ್ತು ವೃಷಭೇಂದ್ರಚಾರ್ಯ ಅವರು "ಮುನ್ನಡೆಯಲ್ಲಿ ಕೂಡ್ಲಿಗಿ" ಎಂಬ ಗ್ರಂಥದಲ್ಲಿ {ಕೂಡ್ಲಿಗಿ ತಾಲೂಕಿನ ಸಮಗ್ರ ದರ್ಶನ} ಎಂಬ ಸಂಪಾದಿತ ಗ್ರಂಥದಲ್ಲಿ ಈ ತಾಲೂಕಿನ ಅಂಕಿ ಅಂಶಗಳ ಮಾಹಿತಿ, ಶಾಸನಗಳ ಸಮೀಕ್ಷೆ ಮತ್ತು ಇತರೆ ವಿವರಗಳನ್ನು ನೀಡಿರುತ್ತಾರೆ. ವಿರೂಪಾಕ್ಷಿ ಪೂಜಾರಹಳ್ಳಿಯವರು **"ಚಿನ್ನ ಹಗರಿಸಿರಿ"** ಎಂಬ ಗ್ರಂಥವನ್ನು ೨೦೦೯ರಲ್ಲಿ ಪ್ರಕಟಿಸಿ ಅದರಲ್ಲಿ ಇವರು ಚಿನ್ನಹಗರಿ ನದಿ ಪರಿಸರದ ಭೌಗೋಳಿಕತೆಯನ್ನು ಮತ್ತು ನದಿ ದಂಡೆಯಲ್ಲಿ ದೊರೆತಿರುವ ಪ್ರಾಚ್ಯಾವಶೇಷಗಳನ್ನು ಕುರಿತು ವಿವರಿಸಿರುತ್ತಾರೆ.

ಲೋಕೇಶ **ಜಿ.ಎಂ. ಅವರು "ಚಿನ್ನಹಗರಿ ಪರಿಸರದ ಚಾರಿತ್ರಿಕ ಅಧ್ಯಯನ"** ಎಂಬ ವಿಷಯವನ್ನು ಕುರಿತು ಸಂಶೋಧನೆ ಕೈಗೊಂಡು ಎಂ. ಫಿಲ್. ನಿಬಂಧವನ್ನು ಸಲ್ಲಿಸಿರುತ್ತಾರೆ. ಕೊಟ್ರೇಶ ಎಂ. **ಇವರು ೨೦೧೧ ರಲ್ಲಿ "ಬಳ್ಳಾರಿ ಜಿಲ್ಲೆಯ ಕೋಟೆಗಳು"** ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲೂಕಿನ ಚಾರಿತ್ರಿಕ ಕಾಲಘಟ್ಟದ ಕೋಟೆಗಳ ಬಗ್ಗೆ ವಿವರಣೆ ನೀಡಿರುತ್ತಾರೆ. ವಾಸುದೇವ ಬಡಿಗೇರ ಅವರು ೨೦೧೨ರಲ್ಲಿ **"ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ"** ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲೂಕಿನ ದೇವಾಲಯಗಳು ಹಾಗೂ ಇತರ ಅವಶೇಷಗಳನ್ನು ಕುರಿತು ಚರ್ಚಿಸಿದ್ದಾರೆ.

ಉಜ್ಜಯಿನಿ ರುದ್ರಪ್ಪ ಇವರು ೨೦೧೨ರಲ್ಲಿ **"ಕೌತುಕ"** ಎಂಬ ಗ್ರಂಥದಲ್ಲಿ ಕೂಡ್ಲಿಗಿ ತಾಲೂಕಿನ ಕೌತುಕದ ವಿಷಯಗಳಾದ ರಾಜ್ಯ ಇಲ್ಲದ ಜರಿಮಲಿ ರಾಜನ ಕಥೆ, ಕೂಡ್ಲಿಗಿಯಲ್ಲಿ ಗಾಧೀಜಿ ಚಿತಾಭಸ್ಮ, ಚಿಕ್ಕಜೋಗಿಹಳ್ಳಿ ತಾಂಡದ ಸೈನಿಕನೊಬ್ಬ ದೈವತ್ವ ಪಡೆದ ಲಂಬಾಣಿ ಸೈನಿಕ ಹಾಗೂ ಇನ್ನಿತರ ಚಾರಿತ್ರಿಕ ಸಂಗತಿಗಳನ್ನು ಒಳಗೊಂಡಿರುವ ೨೫ ಲೇಖನಗಳನ್ನು ಈ ಗ್ರಂಥದಲ್ಲಿ ಪ್ರಕಟಿಸಿರುತ್ತಾರೆ. ನಂತರ ಇವರು ೨೦೧೮ರಲ್ಲಿ **"ಅಚ್ಚರಿ"** ಎಂಬ ಮತ್ತೊಂದು ಪುಸ್ತಕವನ್ನು ಪ್ರಕಟಿಸಿ ಕೂಡ್ಲಿಗಿ ತಾಲೂಕಿನ ಅಚ್ಚರಿಯ ವಿಷಯಗಳನ್ನು ಈ ಗ್ರಂಥದಲ್ಲಿ ವಿವರಿಸಿರುತ್ತಾರೆ. ಭೀಮಣ್ಣ ಗಜಾಪುರ ಇವರು **"ಕನಸುಗಳಿಗೆ ರೆಕ್ಕೆ ಕಟ್ಟಿದವರು"** ಎಂಬ ಪತ್ರಿಕಾವರದಿಯ ಲೇಖನಗಳ ಸಂಗ್ರಹ ಆಧರಿಸಿ ಪುಸ್ತಕವನ್ನು ಪ್ರಕಟಿಸಿರುತ್ತಾರೆ. ಕರಿಬಸಪ್ಪ ಎ. ಇವರು ೨೦೦೩ರಲ್ಲಿ **"ಬಳ್ಳಾರಿ ಜಿಲ್ಲೆಯ ಐತಿಹ್ಯಗಳು"** ಎಂಬ ಪಿಎಚ್.ಡಿ. ಪ್ರಬಂಧದಲ್ಲಿ ಕೂಡ್ಲಿಗಿ ತಾಲೂಕಿನ ಕೆಲವು ಐತಿಹ್ಯಗಳನ್ನು ವಿವರಿಸಿರುತ್ತಾರೆ. ಭೀಮಸಮುದ್ರದ ರಂಗನಾಥ ಅವರು **"ಕೂಡ್ಲಿಗಿ ತಾಲ್ಲೂಕಿನ ಪುರಾತತ್ವ ನೆಲೆಗಳು"**(ಅಪ್ರಕಟಿತ ಕೃತಿ). ತಿಪ್ಪೇಶ ಹೆಚ್.ಎಂ. ಅವರು **"ಕೂಡ್ಲಿಗಿ ತಾಲ್ಲೂಕಿನ ಬೃಹತ್ ಶಿಲಾಯುಗದ ನೆಲೆಗಳು"** ಕುರಿತು ಎಂ.ಫಿಲ್ ಪದವಿಯನ್ನು ಅಧ್ಯಯನ ಮಾಡಿದ್ದಾರೆ.

ಸುರೇಶ ಎಂ, ವಾಸುದೇವ ಬಡಿಗೇರ, ಮಾಡಲಗೇರಿ ಕೊಟ್ರೇಶ, ಸೋಮಶೇಖರ ಎಸ್.ವೈ. ಅವರು ೧೯೯೯ರಲ್ಲಿ **"ಕರ್ನಾಟಕ ದೇವಾಲಯ ಕೋಶ-ಬಳ್ಳಾರಿ ಜಿಲ್ಲೆ"** ಈ ಗ್ರಂಥದಲ್ಲಿ ಕೂಡ್ಲಿಗಿ ತಾಲ್ಲೂಕಿನ ದೇವಾಲಯಗಳನ್ನು ಕುರಿತಂತೆ ಇವರು ವಿವರಿಸಿದ್ದಾರೆ. ನಾಗಯ್ಯ ಜೆ.ಎಂ. ಅವರು ೨೦೦೨ **"ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ"** ಈ ಗ್ರಂಥದಲ್ಲಿ ಜಿಲ್ಲೆಯನ್ನು ಆಳಿದವರ ಚಕ್ರವರ್ತಿಗಳು, ಮಹಾಮಂಡಳೇಶ್ವರರು, ಮಹಾಸಾಮಂತರು ಮುಂತಾದವರನ್ನು ಕುರಿತು ಈ ಗ್ರಂಥದಲ್ಲಿ ತಿಳಿಸಲಾಗಿದೆ. ರವಿಕುಮಾರ ಎನ್.ಎಂ. ಡಾ.ವೃಷಭೇಂದ್ರಚಾರ್ ಅವರು **"ಮುನ್ನಡೆಯ ಕೂಡ್ಲಿಗಿ"** ಈ ಗ್ರಂಥದಲ್ಲಿ ಕೂಡ್ಲಿಗಿ ತಾಲೂಕಿನ ಭೌಗೋಳಿಕ, ಚಾರಿತ್ರಿಕ ಹಿನ್ನೆಲೆಯನ್ನು ಕುರಿತು ಸಮಗ್ರವಾಗಿ ತಿಳಿಸಿದ್ದಾರೆ. ಹಾಗೂ **"ಕಾನಾಹೊಸಹಳ್ಳಿ"** ಎಂಬ ಲೇಖನದಲ್ಲಿ ವಿರೇಂದ್ರ ಪಾಟೀಲ್ ಕೆ.ಜಿ. ಇವರು ಕಾನಾಹೊಸಹಳ್ಳಿಯ ಸಂಸ್ಕೃತಿ, ಆಚರಣೆಗಳನ್ನು ಕುರಿತು ತಿಳಿಸಿದ್ದಾರೆ. ರವೀಂದ್ರನಾಥ ಕೆ. ಅವರು ೨೦೦೫ರಲ್ಲಿ **"ಬಳ್ಳಾರಿ ಜಿಲ್ಲಾ ದರ್ಶನ"** ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಲೋಕೇಶ್, ಇವರು **"ಕೂಡ್ಲಿಗಿ ಹೋಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ"** ಎಂಬ ವಿಷಯದಲ್ಲಿ ಎಂ.ಫಿಲ್ ಪದವಿಯನ್ನು ಅಧ್ಯಯನ ಮಾಡಿದ್ದಾರೆ.

ಹೀಗೆ ಕೂಡ್ಲಿಗಿ ತಾಲೂಕನ್ನು ಕುರಿತಂತೆ ಅಧ್ಯಯನಗಳು, ಲೇಖನಗಳು, ಗ್ರಂಥಗಳು, ಪತ್ರಿಕಾವರದಿಗಳು, ಇತಿಹಾಸ, ಸಂಸ್ಕೃತಿ ಬಗ್ಗೆ ಕೆಲವು ಕೃತಿಗಳು ಪ್ರಕಟವಾಗಿದ್ದರೂ ಅವು ನಿರ್ದಿಷ್ಟವಾದ ಒಂದು ವಿಷಯವನ್ನು ಅಥವಾ ಒಂದು ಸ್ಥಳವನ್ನು, ಕುರಿತು ಚರ್ಚಿಸಿವೆ. ಹೀಗೆ ಇಡೀ ಬಳ್ಳಾರಿ ಜಿಲ್ಲೆಯ ಹಾಗೂ ಕೂಡ್ಲಿಗಿ ತಾಲೂಕನ್ನು ಗಮನದಲ್ಲಿಟ್ಟುಕೊಂಡು ಈ ತಾಲೂಕಿನ ಹೋಬಳಿಗಳ ಬಗ್ಗೆ ದೊರೆತಿರುವ ಎಲ್ಲ ಆಕರಗಳನ್ನು ಬಳಸಿಕೊಂಡು "ಕಾನಾಹೊಸಹಳ್ಳಿ ಗ್ರಾಮದ ಸಾಂಸ್ಕೃತಿಕ ಅಧ್ಯಯನ" ಎಂಬ ಶೀರ್ಷಿಕೆಯಡಿಯಲ್ಲಿ ಸಾಂಸ್ಕೃತಿಕ ಹಿನ್ನೆಲೆಯನ್ನು ಒಳಗೊಂಡು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಯನ ಸ್ವರೂಪ

ಪ್ರಸ್ತುತ ಅಧ್ಯಯನದ ಉದ್ದೇಶ, ವ್ಯಾಪ್ತಿ, ಅಂಶಗಳ ಹಿನ್ನೆಲೆಯಲ್ಲಿ ಈ ಸಂಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಏಳು ಅಧ್ಯಯಗಳನ್ನಾಗಿ ವಿಭಾಗಿಸಲಾಗಿದೆ. ಮೊದಲನೇ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸಮೀಕ್ಷೆ ಮತ್ತು ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಕಾನಾಹೊಸಹಳ್ಳಿ ಗ್ರಾಮದ ಭೌಗೋಳಿಕ ಅಂಶಗಳಾದ ಭೂ ವಿಸ್ತೀರ್ಣ, ಹವಾಗುಣ, ಜನಸಂಖ್ಯೆ, ಜಲಸಂಪತ್ತು, ಮುಂತಾದ ವಿಷಯಗಳನ್ನು ಬಳಸಿಕೊಳ್ಳಲಾಗಿದೆ. ಅಲ್ಲದೆ ಅಧ್ಯಯನದಲ್ಲಿ ಚಾರಿತ್ರಿಕ ಹಿನ್ನೆಲೆಯಲ್ಲಿ ಅಲ್ಲಿನ ರಾಜಕೀಯ ಅಂಶಗಳನ್ನು ತಿಳಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಕಾನಾಹೊಸಹಳ್ಳಿ ಗ್ರಾಮದ ಸ್ಥಳನಾಮ ಮತ್ತು ಐತಿಹ್ಯ ಕುರಿತು ವಿಶ್ಲೇಷಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕಾನಾಹೊಸಹಳ್ಳಿ ಗ್ರಾಮದಲ್ಲಿನ ದೇವಾಲಯಗಳನ್ನು ಕುರಿತು ಹಾಗೂ ದೇವರುಗಳ ಸಾಂಪ್ರದಾಯಿಕ ಆಚರಣೆಯ ಪದ್ಧತಿ ಅವುಗಳ ಸಾಂಸ್ಕೃತಿಕ ಹಿನ್ನೆಲೆಯನ್ನು ತಿಳಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಕಾನಾಹೊಸಹಳ್ಳಿ ಗ್ರಾಮದ ಪರಿಸರದಲ್ಲಿ ಕಂಡುಬರುವ ಕೆರೆ, ಬಾವಿಗಳನ್ನು ಕುರಿತಂತೆ ಐತಿಹ್ಯಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಲಾಗಿದೆ.

ಆರನೇ ಅಧ್ಯಾಯದಲ್ಲಿ ಕಾನಾಹೊಸಹಳ್ಳಿ ಗ್ರಾಮದಲ್ಲಿ ಇರುವ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸ್ಥಿತಿಗತಿಗಳನ್ನು ಕೂಲಂಕಷವಾಗಿ ವಿವರಿಸಲಾಗಿದೆ.

ಏಳನೇ ಅಧ್ಯಾಯವು ಸಮಾರೋಪವಾಗಿದ್ದು ಇದು ಇಡೀ ಅಧ್ಯಯನದಲ್ಲಿ ಕಂಡುಕೊಂಡು ಒಟ್ಟಾರೆ ಸಂಶೋಧನೆಯ ಫಲಿತಾಂಶವನ್ನು ಒಳಗೊಂಡಿದೆ. ಅದರೊಂದಿಗೆ ಇಡೀ ಅಧ್ಯಾಯಗಳ ಸಂಕ್ಷಿಪ್ತ ರೂಪವನ್ನು ಈ ಅಧ್ಯಯನದಲ್ಲಿ ಸ್ಪಷ್ಟಪಡಿಸಲಾಗಿದೆ.

# ಅಧ್ಯಾಯ : ಎರಡು
# ಭೌಗೋಳಿಕತೆ : ಮತ್ತು ಚಾರಿತ್ರಿಕ ಹಿನ್ನೆಲೆ

## ೨.೧ ಭೌಗೋಳಿಕತೆ

ಯಾವುದೇ ಒಂದು ಪ್ರದೇಶದ ಬಗ್ಗೆ ಸಂಶೋಧನ ಕಾರ್ಯ ಕೈಗೊಳ್ಳಬೇಕಾದರೆ ಪ್ರಮುಖವಾಗಿ ಅಲ್ಲಿನ ಭೌಗೋಳಿಕ ಪರಿಸರದ ವೈಶಿಷ್ಟ್ಯಗಳನ್ನು ತಿಳಿದುಕೊಳ್ಳಬೇಕಾದುದು ತುಂಬ ಅವಶ್ಯಕ. ಭೌಗೋಳಿಕ ಅಂಶಗಳು ಸಮಾಜದ ಮೇಲೆ ಅಪಾರ ಪ್ರಭಾವ ಬಿರುತ್ತವೆ. ಇದರೊಂದಿಗೆ ಅಲ್ಲಿನ ಚರಿತ್ರೆ ಮತ್ತು ಭೌಗೋಳಿಕತೆ ಅನನ್ಯತೆಯ ಸಂಬಂಧ ಹೊಂದಿರುತ್ತವೆ. ಭೌಗೋಳಿಕತೆ ಅರಿವಿಲ್ಲದೆ ಚರಿತ್ರೆ ರಚನೆ ತುಂಬ ಕ್ಲಿಷ್ಟಕರ. ಅದೇ ರೀತಿ ಭೌಗೋಳಿಕ ಅಂಶಗಳು ಪ್ರಭಾವ ಬೀರಿದ ಪ್ರದೇಶದಲ್ಲಿನ ಚರಿತ್ರೆ, ಸ್ಮಾರಕ ಹಾಗೂ ಅವಶೇಷಗಳ ಮೇಲೆ ಪ್ರಭಾವವಿರುತ್ತದೆ.

ಒಂದು ನಿರ್ದಿಷ್ಟ ಪ್ರದೇಶದ ಅಧ್ಯಯನದಲ್ಲಿ ಭೌಗೋಳಿಕ ಹಿನ್ನೆಲೆಯ ವಿಷಯ ಬಹಳ ಮುಖ್ಯವಾದುದು. ಭೂಮಿಯು ಮಾನವನ ವಾಸಸ್ಥಾನವಾಗಿದ್ದು, ಅದು ಹೊಂದಿರುವ ಭೌತಿಕ ಹಾಗೂ ಜೈವಿಕ ಅಂಶಗಳನ್ನು ಕುರಿತು ವಿಸ್ತೃತ ಅಧ್ಯಯನವನ್ನು ಒಳಗೊಂಡಿದೆ. ವೈವಿಧ್ಯಮಯ ಭೂಸ್ವರೂಪಗಳು, ಜಲರಾಶಿ, ಸಸ್ಯ ಮತ್ತು ಪ್ರಾಣಿ ವರ್ಗ ಅವನ್ನು ಸುತ್ತುವರೆದಿರುವ ವಾಯು ಮಂಡಲ ಪ್ರಾಕೃತಿಕ, ಭೌಗೋಳಿಕ ಹಿನ್ನೆಲೆ ಒಳಗೊಂಡಿವೆ. ಇವು ಸ್ವಾಭಾವಿಕ ಪರಿಸರವನ್ನು ಸೃಷ್ಟಿಸುವುದರ ಜೊತೆಗೆ ಮಾನವನ ಜೀವನಕ್ರಮವನ್ನು ನಿರ್ಧರಿಸುತ್ತವೆ ಮಾನವನ ಬದುಕಿನ ಮೇಲೆ ಗಾಢ ಪ್ರಭಾವ ಬೀರುತ್ತವೆ. ಆದಿಮಾನವ ಬದುಕುವುದಕ್ಕಾಗಿ ಅನುಕೂಲಕರ ಭೌಗೋಳಿಕ ಪರಿಸರವನ್ನು ಶೋಧಿಸಿ ಅಲ್ಲಿ ನೆಲೆಯೂರುತ್ತಿದ್ದ. ಯಾವ ಪ್ರದೇಶದಲ್ಲಿ ಪ್ರಾಕೃತಿಕ ಸಂಪತ್ತು ಹೇರಳವಾಗಿರುತ್ತದೆಯೋ ಅದು ಬಹಳ ಅಭಿವೃದ್ಧಿ ಹೊಂದಿರುತ್ತದೆ. ಆ ಪ್ರದೇಶದ ಪರ್ವತ ಶ್ರೇಣಿ, ಬೆಟ್ಟ-ಗುಡ್ಡ, ಮಳೆಯ ಪ್ರಮಾಣ, ಹವಾಗುಣ, ಉಷ್ಣಾಂಶ, ಕಾಡು, ಪ್ರಾಣಿವರ್ಗ ಮುಂತಾದ ಭೌಗೋಳಿಕ ಅಂಶಗಳು ಮನುಷ್ಯನನ್ನು ಆ ಪ್ರದೇಶದಲ್ಲಿ ನೆಲೆಗೊಳ್ಳುವಂತೆ ಮಾಡುತ್ತವೆ. ಅದೇ ರೀತಿ ಉತ್ತಮ ಭೌಗೋಳಿಕ ಪರಿಸರ ಆ ಪ್ರದೇಶದ ನೈಸರ್ಗಿಕ ಸಂಪತ್ತನ್ನು ಹೆಚ್ಚಿಸಿ ಜನಜೀವನ, ನಾಗರಿಕತೆ, ಸಂಸ್ಕೃತಿ, ಕಲೆ, ವಾಸ್ತುಶಿಲ್ಪದ ಅಭಿವೃದ್ಧಿಗೆ ಅನುವು ಮಾಡಿಕೊಡುತ್ತದೆ. ಪ್ರಮುಖ ಪ್ರಾಚೀನ ನಾಗರಿಕತೆಗಳು ಬೆಳೆದು ಬಂದಿದ್ದು ನದಿ ಬಯಲಿನ ಪ್ರದೇಶದಲ್ಲಿ. ಇವು ಮಾನವನ ನಾಗರಿಕತೆ ಮತ್ತು ಸಂಸ್ಕೃತಿ ಮೂಡಿಬರಲು ಕಾರಣವಾದವು.

ಈ ಅಂಶವನ್ನು ಗಮನ ಹರಿಸಿ ಪ್ರಸ್ತುತ ಅಧ್ಯಯನ ಕಾನಾಹೊಸಹಳ್ಳಿ ಗ್ರಾಮದ ಭೌಗೋಳಿಕ ಅಂಶಗಳು ಮಾನವನ ಜೀವನದ ಮೇಲೆ ಯಾವ ರೀತಿ ಪ್ರಭಾವ ಬೀರಿವೆ ಎಂದು ತಿಳಿದುಕೊಳ್ಳುವುದು ಅಗತ್ಯವಾಗಿದೆ. ಬಳ್ಳಾರಿ ಜಿಲ್ಲೆಯ ೮ ತಾಲ್ಲೂಕುಗಳ ವಿಸ್ತೀರ್ಣದಲ್ಲಿ ಕೂಡ್ಲಿಗಿ ತಾಲ್ಲೂಕು ಅತಿ ದೊಡ್ಡ ತಾಲ್ಲೂಕು ಆಗಿದೆ. ಇದರ ವಿಸ್ತೀರ್ಣ ೧,೫೫,೭೦೬ ಹೆಕ್ಟೇರ್‌ಗಳು, ಇದರಲ್ಲಿ ನಾಲ್ಕು ಹೋಬಳಿ(ಫಿರ್ಕಾ)ಗಳಿವೆ. ಕೂಡ್ಲಿಗಿ, ಕೊಟ್ಟೂರು, ಗುಡೆಕೋಟೆ ಹಾಗೂ ಕಾನಾಹೊಸಹಳ್ಳಿ.[೧] ಕಾನಾಹೊಸಹಳ್ಳಿ ಪ್ರದೇಶ ಭಾರತದ ದಖ್ಖನ್ ಪ್ರಸ್ಥಭೂಮಿಯ ದಕ್ಷಿಣ ಭಾರತದ ಕರ್ನಾಟಕದ ಮಧ್ಯ ಭಾಗದ ಬಯಲುಸೀಮೆಯಲ್ಲಿ ನೆಲೆಗೊಂಡಿದೆ. ಇದು ಜಿಲ್ಲಾಕೇಂದ್ರ ಬಳ್ಳಾರಿಯಿಂದ ೮೨ಕಿ.ಮೀ. ಹಾಗೂ ತಾಲ್ಲೂಕು ಕೇಂದ್ರವಾದ ಕೂಡ್ಲಿಗಿಯಿಂದ ೩೦ ಕಿ.ಮೀ ಇದೆ.[೨] ನನ್ನ ಗ್ರಾಮ ಅಧ್ಯಯನಕ್ಕೆ ಅವಶ್ಯಕ ಎನಿಸುವ ಹೋಬಳಿ ಹಾಗೂ ತಾಲೂಕಿನ ಜಿಲ್ಲೆಯ ಹಾಗೂ ಹೊರ ಜಿಲ್ಲೆಯ ಪ್ರದೇಶ ಮತ್ತು ಪ್ರಮುಖ ಅಂಶಗಳನ್ನು ಅಧ್ಯಯನದ ಅವಶ್ಯಕತೆಗೆ ಅನುಗುಣವಾಗಿ ಪ್ರಾಸಂಗಿಕವಾಗಿ ಬಳಸಿಕೊಳ್ಳಲಾಗಿದೆ.

## ಭೂ ರಚನೆ

ಕಾನಾಹೊಸಹಳ್ಳಿಯ ಪರಿಸರವು ಬೆಟ್ಟ, ಗುಡ್ಡ, ಅರಣ್ಯಗಳನ್ನು ಹೊಂದಿದ ಪ್ರದೇಶವಾಗಿದೆ. ಇದು ಸಮುದ್ರ ಮಟ್ಟದಿಂದ ೫೩೩ ಮೀಟರ್ ಎತ್ತರದಲ್ಲಿದೆ. ಈ ಪ್ರದೇಶದ ಗಾಳಿಯ ವೇಗ ಗಂಟೆಗೆ ೨೩ (ಕಿ.ಮೀ.ಫರ್ ಅವರ್ ಬೀಸುತ್ತದೆ) ಇಲ್ಲಿನ ಸರಿಯಾದ ತಾಪಮಾನ ಆಗಿದ್ದು, ಉತ್ತರ ಅಕ್ಷಾಂಶ ೧೪'೩೮'೩೦ ಪೂರ್ವ ರೇಖಾಂಶದ ೭೬'೩೫ ೦೦ ವರೆಗೆ ಈ ಪ್ರದೇಶ ವ್ಯಾಪಿಸಿದೆ. ಒಮ್ಮೊಮ್ಮೆ ೪೫ ಡಿಗ್ರಿ ಉಷ್ಣಾಂಶ ಕಂಡುಬರುತ್ತದೆ. ಪ್ರಾಕೃತಿಕವಾಗಿ ಇಲ್ಲಿನ ಭೂಪ್ರದೇಶದಲ್ಲಿ ಎರೆ ಮಣ್ಣು, ಕಲ್ಲು ಮರಳುಮಿಶ್ರಿತ ಕೆಂಪು ಮತ್ತು ಕಂದು ಮಸೂರಿಯ ಮಣ್ಣುಗಳು ಕಾಣಸಿಗುತ್ತವೆ. ಕಾನಾಹೊಸಹಳ್ಳಿಯು ಒಟ್ಟು ೪.೫ ಚದರ ಕಿ.ಮೀ. ವಿಸ್ತಿರ್ಣವನ್ನು ಹೊಂದಿದೆ.[೩]

## ಹವಾಗುಣ-ಮಳೆ

ಕೂಡ್ಲಿಗಿ ತಾಲ್ಲೂಕನ್ನು ಒಳಗೊಂಡಂತೆ ಕಾನಾಹೊಸಹಳ್ಳಿ ಗ್ರಾಮವು ಬಹುತೇಕ ಒಂದೇ ರೀತಿಯ ಹವಾಗುಣ ಹೊಂದಿದ್ದು ಹೆಚ್ಚಾಗಿ ಶುಷ್ಕ ವಾಯುಗುಣವಿದೆ. ಇದು ಮಳೆಯಾಶ್ರಿತ ಭೂಮಿಯಾಗಿದ್ದು ಮಾನ್ಸೂನ್ ಮಾರುತಗಳೇ ಈ ಪ್ರದೇಶದ ಜೀವಾಳ. ಮುಂಗಾರು ಹಾಗೂ ಹಿಂಗಾರು ಮಳೆ ಸೆರಗಿನ ಪ್ರದೇಶವಾಗಿದೆ. ಇಲ್ಲಿ ಹೆಚ್ಚು ಮಳೆಬೀಳದ ಪರಿಣಾಮ ದಟ್ಟವಾದ ಅರಣ್ಯ ಕಂಡುಬರುವುದಿಲ್ಲ. ಆದರೆ ಬಳ್ಳಾರಿ ಜಿಲ್ಲೆಯಲ್ಲಿಯೇ ಹೆಚ್ಚು ಕಾಯ್ದಿರಿಸಿದ ಅರಣ್ಯ ಪ್ರದೇಶವನ್ನು ಹೊಂದಿರುವ ತಾಲ್ಲೂಕು ಇದಾಗಿದೆ. ಬೇಸಿಗೆಯಲ್ಲಿ ಅತಿ ಹೆಚ್ಚು ಬಿಸಿಲು, ಚಳಿಗಾಲದಲ್ಲಿ ಅತಿ ಚಳಿ ಕಂಡುಬರುತ್ತದೆ. ಇಲ್ಲಿನ ಸರಾಸರಿ ಮಳೆಯ ಪ್ರಮಾಣ ೭೩೯೦ ಮಿ.ಮೀ. ರಷ್ಟಿದೆ. ಈ ಕಾನಾಹೊಸಹಳ್ಳಿ ಗ್ರಾಮದಲ್ಲಿ ಒಂದು ಕೆರೆ ಸೇರಿದಂತೆ ಒಂದು ಕೋಟೆಯಿದೆ.

## ಜನಸಂಖ್ಯೆ

ಭೌಗೋಳಿಕ ವಿಶೇಷತೆ ಹೊಂದಿರುವ ಬಳ್ಳಾರಿ ಜಿಲ್ಲೆಯ ಕೆಲವೇ ತಾಲ್ಲೂಕುಗಳಲ್ಲಿ ಕೂಡ್ಲಿಗಿ ತಾಲ್ಲೂಕು ಒಂದು. ಭೌಗೋಳಿಕತೆಯ ಅನುಗುಣವಾಗಿ ಪರಿಸರಕ್ಕೆ ಹೊಂದಿಕೊಂಡಂತೆ ಜನಸಂಖ್ಯೆ ಕಂಡುಬರುತ್ತದೆ. ಕಾನಾಹೊಸಹಳ್ಳಿ ಗ್ರಾಮದಲ್ಲಿ ಒಟ್ಟು ೧೮೫೦ ಮನೆಗಳು ಇವೆ. ಇಲ್ಲಿನ ಜನಸಂಖ್ಯೆ ಒಟ್ಟು ೮೮೮೭ ಇದೆ. ಇದರಲ್ಲಿ ೪೪೭೧ಗಂಡು, ೪೪೧೬ಹೆಣ್ಣು ಇದ್ದಾರೆ.[೪] ಈ ಗ್ರಾಮದಲ್ಲಿ ಕಂಡುಬರುವ ಸಮುದಾಯಗಳೆಂದರೆ ಬ್ರಾಹ್ಮಣ, ನೇಕಾರ, ಲಿಂಗಾಯಿತ, ರೆಡ್ಡಿ, ಗಾಣಿಗ, ಜಂಗಮರು, ವಿಶ್ವಕರ್ಮ, ಕುರುಬರು, ಅಕ್ಕಸಾಲಿ, ಈಡಿಗ, ಮಡಿವಾಳ, ಹಡಪದ, ನಾಯಕ, ಕಮ್ಮಾರ, ಮಾದಿಗ, ಭೋವಿ, ಉಪ್ಪಾರ, ಕುಂಬಾರ, ಲಂಬಾಣಿ, ಮುಸ್ಲಿಂ. ಈ ಸಮುದಾಯಗಳಲ್ಲಿ ನೇಕಾರ ಸಮುದಾಯವು ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿದೆ.

## ಸಸ್ಯ ಸಂಪತ್ತು ಮತ್ತು ಪ್ರಾಣಿ ವರ್ಗ

ಇಲ್ಲಿನ ಪರಿಸರವು ಬೆಟ್ಟ-ಗುಡ್ಡ ಅರಣ್ಯ ಪ್ರದೇಶಗಳನ್ನು ಹೊಂದಿರುವ ನೆಲೆಯಾಗಿದೆ. ಇದು ಮುಂಗಾರು ಹಾಗೂ ಹಿಂಗಾರು ಮಳೆಯನ್ನು ಅವಲಂಬಿಸಿರುವ ಮಳೆ ಆಶ್ರಯಭೂಮಿ. ಇಲ್ಲಿ ಆರಾಬಿಕ್, ಯುಪೋರ್, ಬಿಯಾಸ್, ಜಾತಿಗಳಿಗೆ ಸೇರಿದ ಕುರಚಲುಗಿಡ ಮರಗಳು ಹೆಚ್ಚಾಗಿ ಬೆಳೆಯುತ್ತವೆ.

ಹುಣಸೆ, ಬೇವು, ದಿಂಡು, ಶ್ರೀಗಂಧ, ಜಾಲಿ, ಬಿಳಿಜಾಲಿ, ಬಾರೆ, ತರೆದ, ತೇಗಾ, ಕಿತ್ತಾಳೆ, ಬಬ್ಬಲಿ, ಮತ್ತಿ, ಹುರುಗಲು, ಹಳಲೆ, ಬೇಲ, ಬಿಲ್ವರಾ, ಈಚಲು, ಪಾಪಸ್ ಕಳ್ಳಿ, ಮುಂತಾದ ಮರಗಿಡಗಳು ಅರಣ್ಯ ಪ್ರದೇಶಗಳಲ್ಲಿ ಅಲ್ಲಲ್ಲಿ ಕಂಡು ಬರುತ್ತವೆ. ತಾಳೆ ಮರದ ದಿಂಡು ಮನೆಯ ಭಾವಣಿಗೆ ಉಪಯೋಗಿಸಲಾಗುವುದು. ಈಚಲ ಗಿಡದಿಂದ ಮನೆಬಳಕೆಯ ವಸ್ತು ಸಾಮಗ್ರಿ ತಯಾರಿಸುತ್ತಾರೆ.

## ಜಲಸಂಪತ್ತು

ಕಾನಾಹೊಸಹಳ್ಳಿ ಗ್ರಾಮದಲ್ಲಿ ಒಂದು ಕೆರೆಯಿದೆ. ಅಲ್ಲದೆ ಬಾವಿಗಳು, ಬೋರ್‌ವೆಲ್‌ಗಳು, ಹಳ್ಳಗಳು, ಹಾಗೂ ಚಿನ್ನ ಹಗರಿ ನದಿಯು ಗ್ರಾಮದ ಪಕ್ಕದಲ್ಲಿ ಹರಿದುಹೊಗುತ್ತದೆ. ಆದ್ದರಿಂದ ಈ ಕೆರೆಬಾವಿಗಳೇ ಈ ಗ್ರಾಮದ ನೀರಿನಾಸರೆಗಳಾಗಿವೆ. ಈ ಹಳ್ಳಗಳು ಕೃಷಿಗೆ ನೀರನ್ನು ಒದಗಿಸುವುದು ಮಾತ್ರವಲ್ಲದೆ ಪ್ರಾಚೀನ ಮಾನವನ ವಸತಿ ತಾಣಗಳಾಗಿವೆ. ಗ್ರಾಮದ ಕೆರೆಯ ಹಿಂಭಾಗದಲ್ಲಿ ಮಾಗಾಣಿ ಮಾಡಿರುವ ಪ್ರದೇಶಗಳು ಸಹ ಕಂಡುಬರುತ್ತವೆ.

## ಬೆಳೆಗಳು

ಮಳೆ ಬಂದರೆ ಬೆಳೆ ಎಂಬುದಾಗಿದೆ ಇಲ್ಲಿನ ಸ್ಥಿತಿ. ಜನ ಮಳೆಯನ್ನು ಆಶ್ರಯಿಸಿದ್ದಾರೆ. ಕೆಂಪು-ಕಂದು ಮರಳುಮಿಶ್ರಿತ ಭೂಮಿ ಇರುವುದರಿಂದ ನೆಲಗಡಲೆ, ಜೋಳ, ಮೆಕ್ಕೆಜೋಳ, ಭತ್ತ, ಸೂರ್ಯಕಾಂತಿ, ಶೇಂಗಾ, ತೊಗರಿ, ಸಜ್ಜೆ, ರಾಗಿ, ನವಣೆ, ಉರುಳಿ, ಮತ್ತು ರೇಷ್ಮೆ ಬೆಳೆಗಳನ್ನು ಬೆಳೆಯುತ್ತಾರೆ. ಈ ಪ್ರದೇಶದ ಪ್ರಮುಖ ಆಹಾರಧ್ಯಾನ ಜೋಳ. ಆದ್ದರಿಂದ ಇದನ್ನು ಹೆಚ್ಚಾಗಿ ಬೆಳೆಯುತ್ತಾರೆ. ಹಾಗೆಯೇ ಔಡಲ, ಹಲಸಂದಿ, ಹೆಸರು, ಮಡಿಕೆಕಾಳುಗಳನ್ನು ಸಹ ಉಳುಮೆಯಿಂದ ತೆಗೆಯುತ್ತಾರೆ.[೫]

## ಗ್ರಾಮರಚನೆ ಮತ್ತು ಸಂಸ್ಕೃತಿ

ಕಾನಾಹೊಸಹಳ್ಳಿ ಹೋಬಳಿಯ ಆಡಳಿತ ಕೇಂದ್ರಸ್ಥಳವಾಗಿದೆ. ಇಲ್ಲಿನ ಜನಸಂಖ್ಯೆ ಸುಮಾರು ೮೮೮೭ ಇದೆ. ತಾಲೂಕು ಕೇಂದ್ರದಿಂದ ೩೦ ಕಿ.ಮೀ. ದೂರದಲ್ಲಿದೆ. ಈ ಗ್ರಾಮದ ಅಗಲ ಕಿರಿದಾದ ಬೀದಿಗಳಿಂದ ಕೂಡಿದ್ದು ಯಾವುದೇ ಹೊಸ ವಿಸ್ತರಣೆ ಕಂಡುಬಂದಿಲ್ಲ. ಆಡಳಿತಕ್ಕೆ ಸಂಬಂಧಿಸಿದಂತೆ ಕೆಲವು ಇಲಾಖಾ ಕಛೇರಿಗಳು ಇಲ್ಲಿವೆ. ಇಲ್ಲಿ ಆರಕ್ಷಕ ಠಾಣೆ, ಬ್ಯಾಂಕ್, ಅಂಚೆ, ತಂತಿ ವಿದ್ಯುತ್, ಮಳೆ ಮಾಪನ ಕೇಂದ್ರ, ನಾಡ ಕಛೇರಿ, ಸಾರ್ವಜನಿಕ ಆಸ್ಪತ್ರೆ, ಗ್ರಂಥಾಲಯ, ತಾತ್ಕಾಲಿಕ ಹೆಲಿಪ್ಯಾಡ್, ಕೆ.ಎಸ್.ಆರ್.ಟಿ.ಸಿ ಬಸ್ ತಂಗುದಾಣ, ಅಂಗನವಾಡಿ ಕೇಂದ್ರಗಳು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಪ್ರೌಢಶಾಲೆ, ಖಾಸಗಿ ಪದವಿ ಪೂರ್ವ ಕಾಲೇಜು, ಖಾಸಗಿ ಪ್ರಥಮ ದರ್ಜೆ ಕಾಲೇಜು, ಮುಂತಾದವು. ಅಲ್ಲದೆ ಈ ಗ್ರಾಮದಲ್ಲಿ ಸಹಕಾರ ಸಂಘಗಳಾದ ಕೃಷಿಪತ್ತಿನ ಸಹಕಾರ ಸಂಘ, ಕನ್ನಡ ರಕ್ಷಣಾ ವೇದಿಕೆ, ಮರುಳಸಿದ್ಧೇಶ್ವರ ಸಂಘ, ಶ್ರೀ ಧರ್ಮಸ್ಥಳ ಗ್ರಾಮಾಭಿವೃದ್ಧಿ ಮಹಿಳಾ ಸಂಘ, ಸಿದ್ಧೇಶ್ವರ ಸ್ವ ಸಹಾಯ ಸಂಘ, ಶ್ರೀ ರೇಣುಕಾದೇವಿ ಸ್ವಸಹಾಯ ಸಂಘ, ಶ್ರೀದೇವಿ ಸ್ವಸಹಾಯ ಸಂಘಗಳಿವೆ. ಕಾನಾಹೊಸಹಳ್ಳಿ ಗ್ರಾಮದಲ್ಲಿ ಮಾರಮ್ಮ ದೇವಾಲಯ ಪ್ರಸಿದ್ಧವಾಗಿದೆ. ಪ್ರತಿ ಮೂರು ಅಥವಾ ಐದು ವರ್ಷಕ್ಕೊಮ್ಮೆ ಮಾರಮ್ಮನ ಜಾತ್ರೆಯನ್ನು ಸುಮಾರು ಒಂದು ತಿಂಗಳ ಕಾಲ ಆಚರಿಸುತ್ತಾರೆ. ಈ ಜಾತ್ರೆಯಲ್ಲಿ ರಥೋತ್ಸವವು ಜರಗುತ್ತದೆ. ಈ ಜಾತ್ರೆಗೆ ಸುತ್ತಮುತ್ತಲಿನ ಗ್ರಾಮದವರು ಸೇರಿದಂತೆ ಬೃಹತ್ ಪ್ರಮಾಣದ ಜನ ಸೇರುತ್ತಾರೆ. ಕಾನಾಹೊಸಹಳ್ಳಿಯ ದಕ್ಷಿಣ ದಿಕ್ಕಿಗೆ ಇರುವಂತಹ ಕಾನಾಮಡುಗಿನ ಶ್ರೀ ಶರಣ ಬಸವೇಶ್ವರ ಪ್ರಸಿದ್ಧ ದೇವಾಲಯವಿದೆ. ಪಶ್ಚಿಮ ದಿಕ್ಕಿಗೆ ಶ್ರೀಗಾಣಗಟ್ಟೆ ಮಾಯಮ್ಮ ದೇವಿ ತುಂಬ ಪ್ರಸಿದ್ಧಿಯನ್ನು ಪಡೆದಿದೆ. ಅಲ್ಲದೆ ಈ ಗ್ರಾಮದಲ್ಲಿ ಉಣ್ಣೆ, ಕೈಮಗ್ಗ ಘಟಕ ಹಾಗೂ ಮಾರಾಟ ಮಳಿಗೆಗಳಿವೆ.

## ಪ್ರಾಗಿತಿಹಾಸ

ಕಾನಾಹೊಸಹಳ್ಳಿಯನ್ನು ಒಳಗೊಂಡಂತೆ ಕೂಡ್ಲಿಗಿ ತಾಲೂಕಿನ ಐತಿಹಾಸಿಕ ಕಾಲದ ಚರಿತ್ರೆಯು ಪ್ರಾಗಿತಿಹಾಸಿಕ ಕಾಲದ ಚರಿತ್ರೆಯಂತೆ ಬಹು ಪುರಾತನವಾದದ್ದಾಗಿದೆ. ಕಾನಾಹೊಸಹಳ್ಳಿಯ ಅಕ್ಕಪಕ್ಕದ ಗ್ರಾಮಗಳಾದ ಕುಮತಿ, ಕಲ್ಲಹಳ್ಳಿ, ಜುಮ್ಮೋಬನಹಳ್ಳಿ, ಸುಣ್ಣಮರಡಿ ಈ ಪ್ರದೇಶಗಳಲ್ಲಿ ದೊರೆತಿರುವ ಅವಶೇಷಗಳ ಆಧಾರದ ಮೇಲೆ ಈ ಕಾನಾಹೊಸಹಳ್ಳಿ ಪರಿಸರವು ಪ್ರಾಗಿತಿಹಾಸ ಕಾಲದ ನೆಲೆಯಾಗಿತ್ತು.[೬] ಎಂಬುದು ತಿಳಿದುಬರುತ್ತದೆ. ಅಲ್ಲದೆ ರಾರ್ಬಟ್ ಬ್ರೂಸ್‌ಫೂಟ್ ಅವರು ಕಾನಾಹೊಸಹಳ್ಳಿಯಲ್ಲಿ ಅನ್ವೇಷಣೆ ಮಾಡಿ ಕೆಲವು ಸೂಕ್ಷ್ಮ ಉಪಕರಣಗಳನ್ನು ಕಂಡುಹಿಡಿಯುವ ಮೂಲಕ ಕಾನಾಹೊಸಹಳ್ಳಿ ಪ್ರದೇಶವು ಪ್ರಾಗ್ಯೆತಿಹಾಸಿಕ ನೆಲೆಯಾಗಿದೆ ಎಂಬುದನ್ನು ಕೂಲಂಕುಷವಾಗಿ ಅವರ 'ದ ಪೂಟ್ ಕಲೆಕ್ಷನ್ ಆಫ್ ಇಂಡಿಯನ್ ಪ್ರೀ ಹಿಸ್ಟಾರಿಕ್ ಅಂಡ್ ಪ್ರೋಟೊ ಹಿಸ್ಟಾರಿಕ್ ಆ್ಯಂಟಿಕುಟೀಸ್' ಎಂಬುದರಲ್ಲಿ ದಾಖಲೆ ಮಾಡಿದ್ದಾರೆ.[೭]

ಇತ್ತೀಚಿಗೆ ಸ್ವತಹ ಸ್ಥಳೀಯರ ಸಹಕಾರದೊಂದಿಗೆ ಹಾಗೂ ಪತ್ರಕರ್ತರಾದ ರಂಗನಾಥ ಭೀಮಸಮುದ್ರ ಹಾಗೂ ಸ್ಥಳೀಯರಾದ ವೀರೇಶ ಕೆ. ಹಾಗೂ ಎಳನೀರು ಗಂಗಣ್ಣ ಇವರುಗಳ ಜೊತೆಗೂಡಿ ಕ್ಷೇತ್ರಕಾರ್ಯ ಕೈಗೊಂಡಾಗ ಕಾನಾಹೊಸಹಳ್ಳಿಯ ಪೂರ್ವಕ್ಕೆ ಇರುವ ಹಾಳುರಾದ ವೀರಗೊಂಡನಹಳ್ಳಿಗೆ ಬೇಟಿ ನೀಡಿದಾಗ ಅಲ್ಲಿ ಸಿಕ್ಕಿರುವ ಪ್ರಾಚ್ಯ ಅವಶೇಷಗಳು ಹಾಗೂ ಗ್ರಾಮದ ಹತ್ತಿರವಿರುವಂತ ಬೃಹತ್ ಶಿಲಾ ಸಮಾಧಿ ದೊರೆತಿದ್ದು,ಇದರ ಅಳತೆ ಉದ್ದ ೩.೨ ಅಡಿ ಅಗಲ ೩.೧೦ ಅಡಿ ಇದ್ದು, ಚಪ್ಪಡಿಗಲ್ಲಿನ ದಕ್ಷಿಣಾಭಿಮುಖವಾಗಿದೆ. ಅಲ್ಲದೆ ಈ ಸ್ಥಳದಲ್ಲಿ ದೊರೆತಂತಹ ಕಲ್ಲಿನ ಆಯುಧ, ಕಬ್ಬಿಣದ ಕಿಟ್ಟು, ಮಣ್ಣಿನ ಮಡಿಕೆ ಚೂರುಗಳು, ಮುಂತಾದ ವಸ್ತುಗಳು ದೊರೆತಿವೆ. ಈ ಪ್ರಾಚ್ಯ ವಸ್ತುಗಳನ್ನು ಅವಲೋಕನ ಮಾಡಿದಾಗ ಇದೊಂದು ಪ್ರಾಗ್ಯೆತಿಹಾಸಿಕ ನೆಲೆಯಾಗಿತ್ತು ಎಂದು ಕಂಡುಬರುತ್ತದೆ. ಕೂಡ್ಲಿಗಿ ತಾಲ್ಲೂಕಿನ ಕಾನಾಹೊಸಹಳ್ಳಿ ಪರಿಸರಕ್ಕೆ ಹೊಂದಿಕೊಂಡಿರುವಂತೆ ವಿವಿಧ ಆದಿ ಮಾನವನ ನೆಲೆಗಳಿದ್ದು, ಅವುಗಳ ಸಂಕ್ಷಿಪ್ತ ಪರಿಚಯ ಇಲ್ಲಿ ಮಾಡಲಾಗಿದೆ ಅದರಲ್ಲಿ ಸುಣ್ಣಮರಡಿ, ಮಾಳೆಹಳ್ಳಿ, ಕಲ್ಲಹಳ್ಳಿ, ಕುಮುತಿ, ಜುಮ್ಮೋಬನಹಳ್ಳಿ, ಮುಂತಾದವು.

## ಸುಣ್ಣಮರಡಿ

ಕಾನಾಹೊಸಹಳ್ಳಿ ಗ್ರಾಮದಿಂದ ೬ ಕಿ.ಮೀ. ದೂರದಲ್ಲಿರುವ ಈ ಪ್ರದೇಶ ಕಾನಾಹೊಸಹಳ್ಳಿಯಿಂದ ಪಶ್ಚಿಮ ದಿಕ್ಕಿಗೆ ಇದೆ. ಇಂದು ಹಾಳೂರಾಗಿರುವ ಈ ನೆಲೆಯು ಬಯಲು ಪ್ರದೇಶವಾಗಿದ್ದು. ಕುರುಚಲು ಗಿಡಗಳಿಂದ ಕೂಡಿದೆ. ಮಳೆಗಾಲದಲ್ಲಿ ತುಂಬಿ ಹರಿಯುವ ಹಳ್ಳ, ಕುಂಟೆಗಳಿಂದ ಕೂಡಿದೆ. ಈ ನೆಲೆಯಲ್ಲಿ ಬೃಹತ್ ಶಿಲಾಯುಗ ಸಂಸ್ಕೃತಿಗೆ ಸೇರಿದ ಶಿಲಾಗೋರಿ ಮತ್ತು ಆ ಕಾಲದ ಕಪ್ಪು-ಕೆಂಪು ವರ್ಣದ ಮಡಿಕೆಯ ಚೂರುಗಳನ್ನು ಸಂಶೋಧಕರು ಪರಿಶೋಧಿಸಿದ್ದಾರೆ.[೯] ಇದರಿಂದ ಈ ನೆಲೆ ಪ್ರಾಗ್ಯೆತಿಹಾಸಿಕ ಮಹತ್ವವನ್ನು ಪಡೆದಿದೆ.

## ಕಲ್ಲಹಳ್ಳಿ

ಕಾನಾಹೊಸಹಳ್ಳಿ ಗ್ರಾಮದಿಂದ ೧೩ ಕಿ.ಮೀ. ದೂರವಿರುವ ಈ ಗ್ರಾಮ (ತಿಪ್ಪೇಹಳ್ಳಿಗೆ ಹೋಗುವ ಹಾಳೂರಿನ ಹತ್ತಿರ) ನೂತನ ಶಿಲಾಯುಗ, ತಾಮ್ರಯುಗ, ಬೃಹತ್ ಶಿಲಾಸಂಸ್ಕೃತಿಯ ನೆಲೆಯನ್ನು ಮತ್ತು ಅದೇ ಕಾಲದ ಉಪಕರಣ, ಮಡಿಕೆ ಭಾಗಗಳು ಮತ್ತು ವರ್ಣಚಿತ್ರಗಳನ್ನು ಶೋಧಿಸಲಾಗಿದೆ.[೧೦]

## ಮಾಳೆಹಳ್ಳಿ

ಕಾನಾಹೊಸಹಳ್ಳಿ ಗ್ರಾಮದಿಂದ ೧೦ ಕಿ.ಮೀ. ದೂರದಲ್ಲಿರುವ ಈ ನೆಲೆಯು ಕಲ್ಲಹಳ್ಳಿಯ-ಮಹಜರ್ (ಉಪಗ್ರಾಮ)ವಾಗಿದೆ. ಇದು ಬಯಲು ಪ್ರದೇಶದಿಂದ ಕೂಡಿದೆ. ಮಾಳೆಹಳ್ಳಿಯ ಕೆರೆಯ ಉತ್ತರಕ್ಕೆ ಹಾಗೂ ತಿಪ್ಪೇಹಳ್ಳಿಗೆ ಹೋಗುವ ದಾರಿಯ ಎಡಬದಿಯಲ್ಲಿ ಕಾಣುವ ಎತ್ತರದ ಹೆಬ್ಬಂಡೆಗಳಿದ್ದು. ಇವುಗಳನ್ನು 'ದವನಪ್ಪನ ಗುಂಡು' ಎಂದು ಕರೆಯಲಾಗುತ್ತದೆ. ಈ ಬಂಡೆಯ ಮಧ್ಯಭಾಗದಲ್ಲಿ ಕುಟ್ಟಿ ರಚಿಸಿದ ಜಿಂಕೆ ಮತ್ತು ಹಾವಿನ ಚಿತ್ರಗಳು ಕಂಡುಬಂದಿವೆ. ಜಿಂಕೆಯ ಚಿತ್ರವು ಉದ್ದವಾದ ಬಾಗಿದ ಕೋಡುಗಳಿಂದ ಗಿಡ್ಡ ದೇಹವನ್ನು ಹಾಗೂ ಕಾಲುಗಳು ಅಸ್ಪಷ್ಟವಾಗಿರುವಂತೆ ಚಿತ್ರಿಸಲಾಗಿದೆ. ದವನ ಎಂಬ ಪದವು ಸುವಾಸನೆಯ ಎಲೆಗಳನ್ನುಳ್ಳ ಒಂದು ಬಗೆಯ ಸಸ್ಯ. ಹಬ್ಬದ ಹೂವು ಎಂಬ ಅರ್ಥವನ್ನು ಸೂಚಿಸುತ್ತದೆ.[೧೧]

## ಕುಮುತಿ

ಕುಮುತಿ ಗ್ರಾಮವು ಕಾನಾಹೊಸಹಳ್ಳಿ ಗ್ರಾಮದಿಂದ ೨೨ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಬಯಲು ಪ್ರದೇಶವಾಗಿದ್ದು ಸಣ್ಣಗುಡ್ಡಗಳನ್ನು ಗ್ರಾಮದ ಸುತ್ತಲೂ ಕಾಣಬಹುದಾಗಿದೆ. ಇದು ಮಳೆ ಕೊರತೆಯ ಪ್ರದೇಶವಾಗಿದೆ. ಹಾಗೆ ಚಿನ್ನ ಹಗರಿ ಹಳ್ಳ ಗ್ರಾಮದ ಪಕ್ಕದಲ್ಲಿ ಹರಿಯುತ್ತದೆ. ೧೯೯೬ರಲ್ಲಿ ಪುರಾತತ್ವ ಇಲಾಖೆ ಬೆಂಗಳೂರು ಶಾಖೆಯವರು ಕೆ.ವಿ ಪೂಣಚ್ಚ ಇವರ ನೇತೃತ್ವದಲ್ಲಿ ಗ್ರಾಮ ಸರ್ವೇಕ್ಷಣಾಕಾರ್ಯವನ್ನು ಹಮ್ಮಿಕೊಂಡ ಸಂದರ್ಭದಲ್ಲಿ ಈ ನೆಲೆಯನ್ನು ಅನ್ವೇಷಿಸಿ ವರದಿ ಮಾಡಿತು. ಇಲ್ಲಿ ಬೃಹತ್ ಶಿಲಾಯುಗದ ಒಂದು ಕಂಡಿಕೋಣೆಯ ಕಲ್ಗೋರಿ, ಭಾರತದಲ್ಲೇ ಅಪರೂಪವಾದ ಏಳು ಮಾನವನಾಕಾರದ ಏಕಶಿಲಾ ಸಮುಚ್ಚಯಗಳಿವೆ. ಈ ಗ್ರಾಮದ ಕೆರೆ ದಂಡೆಯ ಉತ್ತರಕ್ಕೆ ಸುಮಾರು ೩೦ ಮೀ. ದೂರದಲ್ಲಿ ಕೆ.ಎಂ.ತಿಪ್ಪೇರುದ್ರಯ್ಯ ಎಂಬುವರ ಹೊಲದಲ್ಲಿ ಈ ಸಮುಚ್ಚಯಗಳಿವೆ. ಇದರಲ್ಲಿ ಏಳು ಸ್ಮಾರಕ ಶಿಲ್ಪಗಳಿದ್ದು ಇವುಗಳಲ್ಲಿ ಎರಡು ಮಾತ್ರ ಸುಸ್ಥಿತಿಯಲ್ಲಿವೆ. ಇದನ್ನು ದಕ್ಷಿಣೋತ್ತರವಾಗಿ ನಿಯೋಜಿಸಲಾಗಿದೆ.[೧೨]

## ಜುಮ್ಮೋಬನಹಳ್ಳಿ

ಕಾನಾಹೊಸಹಳ್ಳಿ ಕೇಂದ್ರಸ್ಥಳದಿಂದ ೬.ಕಿ.ಮೀ. ದೂರದಲ್ಲಿರುವ ಈ ನೆಲೆಯಲ್ಲಿ ಆದಿ ಹಳೆ ಶಿಲಾಯುಗ ಸಂಸ್ಕೃತಿಗೆ ಸೇರಿದ ಅಬ್ಬೇವಿಲಿಯನ್ ತಂತ್ರಗಾರಿಕೆಯಿಂದ ತಯಾರಿಸಿದ ಶಿಲಾಕೊಡಲಿಯನ್ನು ಶೋಧಿಸಲಾಗಿದೆ. ಇದರಿಂದ ಈ ಸ್ಥಳವು ಪ್ರಾಗೈತಿಹಾಸಿಕ ನೆಲೆಯೆಂದು ಹೇಳಬಹುದು.[೧೩] ಒಟ್ಟಾರೆಯಾಗಿ ಕಾನಾಹೊಸಹಳ್ಳಿ ಪರಿಸರಕ್ಕೆ ಹೊಂದಿಕೊಂಡಿರುವಂತಹ ಪ್ರದೇಶಗಳಾದ ಕಲ್ಲಹಳ್ಳಿಯು (ನವಶಿಲಾಯುಗ, ಶಿಲಾ-ತಾಮ್ರಯುಗ ಹಾಗೂ ಬೃಹತ್ ಶಿಲಾಯುಗ) ನೆಲೆಯಾಗಿದೆ. ಜುಮ್ಮೋಬನಹಳ್ಳಿ (ಆದಿ ಹಳೆಶಿಲಾಯುಗ/ಸೂಕ್ಷ್ಮ ಶಿಲಾಯುಗದ ನೆಲೆ) ಕುಮುತಿ (ಬೃಹತ್ ಶಿಲಾಯುಗದ ನೆಲೆ) ಈ ಮೇಲಿನ ಎಲ್ಲ ಆಧಾರಗಳಿಂದ ಕಾನಾಹೊಸಹಳ್ಳಿ ಪ್ರದೇಶವು ಸಹ ಒಂದು ಪ್ರಾಗೈತಿಹಾಸಿಕ ನೆಲೆ ಎಂದು ಗುರುತಿಸಬಹುದು.

## ೨.೨ ಚಾರಿತ್ರಿಕ ಹಿನ್ನೆಲೆ

ಪ್ರಾಚೀನ ಚರಿತ್ರೆಯಲ್ಲಿ ದಖ್ಖನ್ ಪ್ರಸ್ಥಭೂಮಿ ಭಾಗವನ್ನು 'ಕುಂತಲದೇಶ' ಎಂದು ಕರೆಯುತಿದ್ದರು. ಕ್ರಿಪೂ. ೪ನೇ ಶತಮಾನದಲ್ಲಿ ಆಳಿದ ನಂದರು ಕುಂತಲದೇಶಕ್ಕೂ ಒಡೆಯರಾಗಿದ್ದರು. ಮೌರ್ಯರ ಆಳ್ವಿಕೆ ಕಾಲದಲ್ಲಿ ದಕ್ಷಿಣ ಭಾರತವನ್ನೊಳಗೊಂಡಂತೆ ಈ ಪ್ರದೇಶ ಅವರ ಅಧೀನದಲಿತ್ತು.[೧೪] ಮೌರ್ಯರ ಚಕ್ರವರ್ತಿ ಅಶೋಕ ಕ್ರಿಪೂ. ಸುಮಾರು ೨೭೨-೨೩೨ರವರೆಗೆ ಆಳ್ವಿಕೆ ಮಾಡುವಾಗ ಇವನ ಶಾಸನಗಳು ನೆರೆ ಸೀಮೆಗಳಾದ ಗವಿಮಠ, ಮಸ್ಕಿ, ನಿಟ್ಟೂರು, ಸಿದ್ದಾಪುರ, ಜಟಂಗರಾಮೇಶ್ವರ, ಬ್ರಹ್ಮಗಿರಿಗಳಲ್ಲಿ ದೊರೆತಿವೆ. ಬ್ರಹ್ಮಗಿರಿ ಶಾಸನದ ಉಲ್ಲೇಖದಂತೆ ಇದು (ಇಸಿಲ) ಸಾಮ್ರಾಜ್ಯದ ದಕ್ಷಿಣಗಡಿಯಾಗಿದ್ದು ಇಸಿಲವನ್ನು ಆಡಳಿತದ ಕೇಂದ್ರವಾಗಿ ಮಾಡಿಕೊಂಡು ಮಹಾಮಾತ್ರರನ್ನು ಅಲ್ಲಿ ನೇಮಿಸಿದ್ದಿರಬಹುದು.[೧೫]

ಹಾಗೆಯೇ ಮೌರ್ಯಸಾಮ್ರಾಟ ಅಶೋಕನ ಆಳ್ವಿಕೆ ಕಾಲದ ಕ್ರಿ.ಪೂ.೨೫೮ರ ಶಾಸನ ಕೂಡ್ಲಿಗಿ ತಾಲೂಕಿನಲ್ಲಿ ದೊರೆತಿರುವುದು ಮತ್ತಷ್ಟು ಪುಷ್ಟೀಕರಿಸಿದೆ.[೧೬] ಅಶೋಕನ ಪ್ರತಿನಿಧಿಯಾದ ಮಹಾಮಾತ್ರನು ಈ ಪ್ರಾಂತ್ಯವನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ. ಕಾನಾಹೊಸಹಳ್ಳಿ ಗ್ರಾಮದಲ್ಲಿ ಹಿಂದುಳಿದ ವರ್ಗಗಳು ಅಧಿಕವಾಗಿರುವುದನ್ನು ಕಾಣುತ್ತೇವೆ. ಶಿಷ್ಟ ಸಂಸ್ಕೃತಿಯೊಡನೆ ಹಿಂದುಳಿದ ಸಂಸ್ಕೃತಿಯು ಎದ್ದು ಕಾಣುವಂತೆ ಬೆರೆತುಕೊಂಡಿದೆ. ಇಲ್ಲಿ ಜನರು ಹಿಂದುಳಿದವರಾದರೂ ಅವರ ಆದರ್ಶಮೌಲ್ಯಗಳು ಕುಂದುವಂತಹುವಲ್ಲ. ಇಲ್ಲಿ ಒಂದು ಊರಿನ ಅಥವಾ ತಾಲ್ಲೂಕಿನ/ಹೋಬಳಿ ಇತಿಹಾಸವೆಂದರೆ ಕೇವಲ ಅದಕ್ಕೊಂದೆ ಸೀಮಿತವಾಗಿರುವುದಿಲ್ಲ. ತನ್ನ ಸುತ್ತಮುತ್ತಲಿನ ಊರುಗಳ ಅಥವಾ ತಾಲೂಕುಗಳ ಹಾಗೆಯೇ ಅದಕ್ಕೆ ಸಂಬಂಧಪಟ್ಟ ಜಿಲ್ಲೆಯ ಹಾಗೂ ನೆರೆಹೊರೆಯ ಜಿಲ್ಲೆಗಳ ಇತಿಹಾಸಗಳೊಡನೆ ಸಂಬಂಧ ಹೊಂದಿರುವುದು ಸಹಜ. ಆಧುನಿಕ ಯುಗದಲ್ಲಿ ಈ ಸಂಬಂಧದ ಎಳೆಗಳು ರಾಷ್ಟ್ರ ಅಂತಾರಾಷ್ಟ್ರಗಳ ಮಟ್ಟದವರೆಗೂ ವ್ಯಾಪಿಸಿರುತ್ತವೆ. ಗ್ರಾಮದ ಚರಿತ್ರೆಯನ್ನು ಅವಲೋಕಿಸುವಾಗ ನಮ್ಮ ತಾಲ್ಲೂಕು, ಜಿಲ್ಲೆ, ನಾಡು, ದೇಶಗಳ ಭೂಪಟಗಳ ಹಿನ್ನೆಲೆಯಲ್ಲಿ ಗುರುತಿಸಬೇಕಾಗುತ್ತದೆ.

ಪ್ರಮುಖ ಅಂಶವೆಂದರೆ ಕಾನಾಹೊಸಹಳ್ಳಿ ಕೂಡ್ಲಿಗಿ ತಾಲೂಕು ಎಂದು ಮೇರೆಗಳಲ್ಲಿ ಗುರುತಿಸುವ ಭೂಭಾಗವು ಪ್ರಾಚೀನ ಕಾಲದಿಂದಲೂ ಒಂದೇ ರೀತಿಯಾಗಿ ಇದ್ದಿಲ್ಲ. ಕಾಲ ಕಾಲಕ್ಕೆ ಬೇರೆ ಬೇರೆ ರಾಜಕೀಯ ತಿಕ್ಕಾಟಗಳಿಗೆ ಒಳಪಟ್ಟು ಬೇರೆ ಬೇರೆ ರೂಪಗಳನ್ನು ತಾಳುತ್ತಾ ಬಂದಿದೆ. ಬೇರೆ ಬೇರೆ ಆಳ್ವಿಕೆಗೆ ಒಳಪಡುತ್ತ ಬಂದಿದೆ.

## ಶಾತವಾಹನರು

ಕಿ.ಪೂ.೨೨೦ರಿಂದ ಕ್ರಿ.ಶ.೨೫೦ರ ವರೆಗೂ ಸುಮಾರು ನಾಲ್ಕು ನೂರು ವರ್ಷ ಕುಂತಲಾದೇಶವನ್ನು ಶಾತವಾಹನರು ಆಳಿದರು. ಮ್ಯಾಕದೋಣಿ(ಆದೋನಿ) ಹೀರೆಹಡಗಲಿಗಳಲ್ಲಿ (ಬಳ್ಳಾರಿ) ಆಳ್ವಿಕೆಗೆ ಸಂಬಂಧಿಸಿದಂತೆ ಎರಡು ಶಾಸನಗಳು ದೊರೆತಿವೆ. ಇವುಗಳಲ್ಲಿ ಶಾತವಾನಿಹಾರ, ಶಾತವಾನಿರಟ್ಟ ಎಂದು ಉಲ್ಲೇಖಗಳಿವೆ. ದೇವಗಿರಿ, ಚೋರನೂರು, ಅಗ್ರಹಾರ, ಕೂಡ್ಲಿಗಿ, ಕುಡುತಿನಿ, ಹಾಳುದೇವಲಪುರ, ಕೊಟ್ಟೂರು, ಹೆಗ್ಗಡೆಹಾಳು (ಹೆಗ್ಡಾಳ್), ಶಿವಪುರ, ಹಂಪಿ, ಕುರುಗೋಡು, ಎಮ್ಮಿಗನೂರು, ಕಂಪ್ಲಿ, ಬಳ್ಳಾರಿ, ಸಿದ್ದಾಪುರ, ಬ್ರಹ್ಮಗಿರಿ, ಕೋಗಳಿ, ಮುಂತಾದ ಗ್ರಾಮಗಳಲ್ಲಿ ಶಾತವಾಹನರ ಕಾಲದ ಅವಶೇಷಗಳು ಕಂಡುಬರುತ್ತವೆ.[೧೭] ಈ ಅಂಶಗಳನ್ನು ಗಮನಿಸಿದಾಗ ಕೂಡ್ಲಿಗಿ ತಾಲೂಕು ಹೋಬಳಿ ಪ್ರದೇಶಗಳಾದ ಕೂಡ್ಲಿಗಿ, ಕಾನಾಹೊಸಹಳ್ಳಿ, ಗುಡೆಕೋಟೆ, ಕೊಟ್ಟೂರು, ಗ್ರಾಮಗಳು ಹಿಂದೆ ಶಾತವಾಹನರ ಆಳ್ವಿಕೆಗೆ ಒಳಪಟ್ಟಿರಬಹುದಾದ ಸಾಧ್ಯತೆಯನ್ನು ವ್ಯಕ್ತಪಡಿಸುತ್ತವೆ. ಈ ಗ್ರಾಮಗಳು ಆಯಾ ಕಾಲಕ್ಕೆ ಆಯಾ ಆರಸರ ಕಾಲದಲ್ಲಿ ಕೆಲವು ಗುರುತಿಸಿಕೊಂಡರೆ ಮತ್ತೆ ಕೆಲವು ನಿರ್ಲಕ್ಷಕ್ಕೆ ಒಳಗಾಗಿ ಅಭಿವೃದ್ಧಿ ಕಾಣದೇ ಕುಗ್ರಾಮಗಳಾಗಿ ಇದ್ದಿರಬಹುದು. ಅವುಗಳನ್ನು ಗುರುತಿಸಲು ಶತಮಾನಗಳೇ ಕಳೆದಿರಬಹುದು. ಈ ಗ್ರಾಮಗಳು ಶಾತವಾಹನರ ಆಡಳಿತವನ್ನು ಅನುಭವಿಸಿರುವುದು ಮೇಲಿನ ಅಂಶಗಳಿಂದ ತಿಳಿದುಬರುತ್ತದೆ.

## ಬನವಾಸಿ ಕದಂಬರು

ಕ್ರಿ.ಶ.೪-೫ನೇ ಶತಮಾನದಲ್ಲಿ ಪ್ರಸಿದ್ಧಿಗೆ ಬಂದ ಇವರು ಶಾತವಾಹನರ ರಾಷ್ಟ್ರದ ಸಾಂದ್ರೇಕ ವಿಷಯವನ್ನು (ಬಳ್ಳಾರಿ ಜಿಲ್ಲೆಯ ದಕ್ಷಿಣ ಪಶ್ಚಿಮ ಭಾಗ ಇರಬೇಕು) ಗೆದ್ದು ಉಚ್ಚಂಗಿದುರ್ಗವನ್ನು ತಮ್ಮ ರಾಜ್ಯದ ಪೂರ್ವಭಾಗದ ರಾಜಧಾನಿಯಾಗಿ ಮಾಡಿಕೊಂಡರು. ಇವರು ೧೦-೧೨ನೇ ಶತಮಾನಗಳ ವರೆಗೂ ಕದಂಬರ ಒಂದು ಮನೆತನ ಕೊಟ್ಟರು. ಕೋಗಳಿ ನಾಡನ್ನು ಆಳುತ್ತಾ ಬಂದಿದ್ದರೆಂಬುದಕ್ಕೆ

ಶಾಸನಗಳು ಸಿಕ್ಕಿವೆ. ಸಂಡೂರಿನ ಕಾರ್ತಿಕೇಯ ಸ್ವಾಮಿಯ ಉಲ್ಲೇಖವು ಮಯೂರವರ್ಮನ ಚಂದ್ರವಳ್ಳಿ ಶಾಸನದಲ್ಲಿ ಕಂಡುಬರುತ್ತದೆ.[೧೮]

## ಬಾದಾಮಿ ಚಾಲುಕ್ಯರು

ಇವರು ಕ್ರಿ.ಶ.೬ನೇ ಶತಮಾನದಲ್ಲಿ ರಾಜ್ಯ ಸ್ಥಾಪಿಸಿದರು. ಚಾಲುಕ್ಯ ದೊರೆ ಒಂದನೇ ಕೀರ್ತಿವರ್ಮನು ಕದಂಬರನ್ನು, ಕೊಂಕಣದ ಮೌರ್ಯರನ್ನು ಸೋಲಿಸಿ ಆಳ್ವಿಕೆ ನಡೆಸಿದ. ನಂತರ ಇಮ್ಮಡಿ ಪುಲಿಕೇಶಿಯ ಶಾಸನ ಕುರುಗೋಡಿನಲ್ಲಿ ದೊರೆಕಿದೆ. ಈತನ ಮಕ್ಕಳಾದ ಆದಿತ್ಯವರ್ಮ ಮತ್ತು ಚಂದ್ರಾದಿತ್ಯರು ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಯ ಭಾಗಗಳನ್ನು ಆಳುತ್ತಿದ್ದರು.[೧೯]

## ರಾಷ್ಟ್ರಕೂಟರು

ತಮ್ಮ ಪರಾಕ್ರಮದಿಂದ ದಕ್ಷಿಣ ಭಾರತವನ್ನೆಲ್ಲ ತಮ್ಮ ತೋಳ್ಬಲದಿಂದ ಗೆದ್ದು. ತಲಕಾಡಿನ ಗಂಗರನ್ನು ತಮ್ಮ ಸಾಮಂತರನ್ನಾಗಿ ಮಾಡಿಕೊಂಡರು. ಬಳ್ಳಾರಿ, ಚಿತ್ರದುರ್ಗ, ಅನಂತಪುರ, ತುಮಕೂರು, ಮುಂತಾದ ಪ್ರದೇಶಗಳನ್ನು ಆಳಿದರು. ಈ ಪ್ರಾಂತ್ಯಗಳು 'ನೊಳಂಬವಾಡಿ' ಎಂದು ಕರೆಸಿಕೊಳ್ಳುತ್ತಿತ್ತು. ಕೂಡ್ಲಿಗಿ ತಾಲೂಕು ನೊಳಂಬವಾಡಿಯ ಭಾಗವಾಗಿತ್ತು. ಈಗಿನ ಹರಪನಹಳ್ಳಿ ಕೂಡ್ಲಿಗಿಯ ಪಶ್ಚಿಮ ಭಾಗಗಳು[೨೦] ಹಡಗಲಿ ತಾಲೂಕಿನ ಕೆಲ ಪ್ರದೇಶಗಳು ಈಗಿನ ಹಗರಿಬೊಮ್ಮನಹಳ್ಳಿಯ ಕೋಗಳಿ, ಹನಸಿ, (ಹಿಂದೆ ಕೂಡ್ಲಿಗಿ ಭಾಗಗಳು) ಕೂಡ್ಲಿಗಿ ತಾಲೂಕು ನೊಳಂಬವಾಡಿಯ ಕೋಗಳಿ ೫೦೦ಕ್ಕೆ ಒಳಪಟ್ಟಿದ್ದು ಚಾಲುಕ್ಯರು ಕೋಗಳಿ ನಾಡನ್ನು ಆಳುತಿದ್ದರು.

## ಹೊಯ್ಸಳರು

ಕ್ರಿ.ಶ.೧೧೦೮ ರಿಂದ ೧೩೧೧ ರವರೆಗೆ ಬಳ್ಳಾರಿ ಜಿಲ್ಲೆ ಸೇರಿದಂತೆ ದಕ್ಷಿಣ ಭಾಗವೆಲ್ಲ ಹೊಯ್ಸಳ ಸಾಮ್ರಾಜ್ಯದ ಭಾಗವಾಗಿತ್ತು. ವಿಷ್ಣುವರ್ಧನನು ಬಳ್ಳಾರಿ, ರಾಯಚೂರು ಪ್ರದೇಶವನ್ನು ಗೆದ್ದನು. ಉಚ್ಚಂಗಿ ಪಾಂಡ್ಯರು ಹೊಯ್ಸಳರ ಸಾಮಂತರಾಗಿದ್ದರು. ಕಾಲಾಂತರದಲ್ಲಿ ಸೇವುಣರ ಸಿಂಘಣ ಮತ್ತು ಅವನ ಮಗ ಕೃಷ್ಣರ ವಂಶದಲ್ಲಿ ಕೋಗಳಿನಾಡು ದಾವಣಗೆರೆ ಭಾಗಗಳಾಗಿದ್ದವು.[೨೧]

## ಕುಮ್ಮಟದುರ್ಗದ ಅರಸರು

ಕ್ರಿ.ಶ.೧೩೧೧ರಲ್ಲಿ ಮಲ್ಲಿಕಾಫರನ ದಾಳಿಯಿಂದ ಹೊಯ್ಸಳರು ಅವನತಿ ಕಡೆ ಸಾಗಿ[೧೬] ಕಂಪಿಲರಾಯ ಮತ್ತು ಕುಮಾರರಾಮನಿಂದ ಆರಂಭವಾದ ಇತಿಹಾಸ ಮುಂದೆ ಪಾಳೇಗಾರರ ಹುಟ್ಟಿಗೂ ಕಾರಣವಾಯಿತು. ಹರಿಹರಬುಕ್ಕರು ಕಂಪಿಲರಾಯನ ಆಶ್ರಯ ಬಯಸಿ ಕ್ರಿಶ೧೩೩೬ ರಲ್ಲಿ ವಿಜಯನಗರ ಸ್ಥಾಪನೆಗೆ ಕಾರಣರಾದರು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಪೂರ್ವದಲ್ಲಿ ಕಂಪಿಲರಾಯನ ಕ್ರಿ.ಶ. ೧೩೨೦ರಲ್ಲಿ ಸ್ವತಂತ್ರನಾದ ಸೇವುಣರ ಸಾಮಂತ ಅರಸನಾಗಿದ್ದ.[೨೨] ಕಂಪಿಲರಾಯ ಕಾಲಾನಂತರ ಸ್ವತಂತ್ರನಾಗಿ ಕುಮ್ಮಟದುರ್ಗವನ್ನು (ಕಂಪಿಲ) ರಾಜಧಾನಿಯಾಗಿ ಮಾಡಿಕೊಂಡಿದ್ದ. ನಂತರ ಬಂದ ಕುಮಾರರಾಮ ಜರಿಮಲೆ ಮತ್ತು ಗುಡೆಕೋಟೆ ಅರಸರೊಂದಿಗೆ ರಾಜಕೀಯ ಒಡನಾಟ ಇಟ್ಟುಕೊಂಡಿರುವುದು ಚರಿತ್ರೆಯ ಪುಟಗಳಿಂದ ಗೊತ್ತಾಗುತ್ತದೆ. ಗುಡೆಕೋಟೆ ಮತ್ತು ಜರಿಮಲೆ ನಾಯಕರು ಕೂಡ್ಲಿಗಿ ತಾಲೂಕಿನಲ್ಲಿ ಹೋಬಳಿ ಪ್ರದೇಶಗಳನ್ನು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡಿರುವುದು ಇತಿಹಾಸದ ಆಧಾರದಿಂದ ತಿಳಿದುಬರುತ್ತದೆ.

## ವಿಜಯನಗರದ ಅರಸರು

೧೪ನೇ ಶತಮಾನದ ಪೂರ್ವಾರ್ಧದಲ್ಲಿ (ದಕ್ಷಿಣಭಾರತದಲ್ಲಿ) ವಿಜಯನಗರ ಸ್ಥಾಪನೆಯಾದುದು. ಕರ್ನಾಟಕದ ಇತಿಹಾಸ ಪುಟಗಳಲ್ಲಿ ಒಂದು ಮಹತ್ವವಾದ ಘಟ್ಟ. ಮಲ್ಲಿಕಾಫರನ ದಾಳಿಗಳಿಂದ ತತ್ತರಿಸಿ ದಕ್ಷಿಣ ಭಾರತ ಅಸಂಘಟಿತ ಸ್ಥಿತಿಯಲ್ಲಿತ್ತು. ಅವನ ದಾಳಿಗಳನ್ನು ತಡೆಗಟ್ಟುವಷ್ಟು ಸಮರ್ಥ ಅರಸರ ಕೊರತೆ ಎದ್ದುಕಾಣುತ್ತಿತ್ತು. ಅಂತಹ ಸಂದರ್ಭದಲ್ಲಿ ಹುಟ್ಟಿಕೊಂಡ ಮಹಾಸಾಮ್ರಾಜ್ಯವೇ ವಿಜಯನಗರ ಸಾಮ್ರಾಜ್ಯ. ಕ್ರಿ.ಶ.೧೩೩೬ರಲ್ಲಿ ಸ್ಥಾಪನೆಗೊಂಡ ಇದು ಕ್ರಿ.ಶ.೧೫೬೫ರವರೆಗೆ ನಾಲ್ಕು ಪ್ರಮುಖ ವಂಶಗಳ ಆಳ್ವಿಕೆ ಕಂಡು ಇವರ ಅಧೀನದಲ್ಲಿ ಅನೇಕ ರಾಜಮಹಾರಾಜರು, ಸಾಮಂತರು ಇವರ ತೋಳ್ಬಲಕ್ಕೆ ಶರಣಾಗಿ ರಾಜ್ಯಭಾರ ಮಾಡಿದರು. ವಿಜಯ ನಗರದ ಅರಸರು ಸುಮಾರು ೨೦೦ ವರ್ಷಗಳ ಕಾಲ ಸಾಮ್ರಾಜ್ಯವನ್ನು ಮೆರೆಸಿದ ಕಾಲವದು. ಈ ಅವಧಿಯಲ್ಲಿ ಕೂಡ್ಲಿಗಿ ತಾಲೂಕು ಸೇರಿದಂತೆ ಬಳ್ಳಾರಿ ಜಿಲ್ಲೆಯ ಎಲ್ಲ ಪ್ರದೇಶಗಳಲ್ಲದೆ ನೆರೆಹೊರೆಯ ರಾಜ್ಯಗಳು ಇವರ ಆಡಳಿತಕ್ಕೆ ಒಳಪಟ್ಟವು. ವಿಜಯನಗರದ ಅರಸರ ಶಾಸನಗಳು ಕೂಡ್ಲಿಗಿ ತಾಲೂಕು ಹಾಗೂ ಸಂಡೂರು ತಾಲೂಕುಗಳಲ್ಲಿ ಕಂಡುಬರುತ್ತವೆ. ಜರಿಮಲೆ ಹಾಗೂ ಗುಡೆಕೋಟೆ ಇವರ ಕಾಲದ ಪಾಳೇಪಟ್ಟುಗಳಾಗಿ ಗುರುತಿಸಿಕೊಂಡಿದ್ದವು. ವಿಜಯನಗರದ ಅರಸರು ಇವರಿಗೆ ಕೆಲವು ಪ್ರದೇಶಗಳನ್ನು ಬಿಟ್ಟುಕೊಟ್ಟು ಅವರಿಂದ ಸೈನ್ಯದ ನೆರವನ್ನು ಪಡೆಯಲಾಗುತ್ತಿತ್ತು ಎನ್ನಲಾಗುತ್ತದೆ.

ವಿಜಯ ನಗರದ ಕಾಲದಲ್ಲಿ ಕೂಡ್ಲಿಗಿ ತಾಲೂಕಿನ ಕೆಲ ಪ್ರದೇಶಗಳು ಸೈನಿಕರಿಗೆ ಯುದ್ಧ ಸಾಮಗ್ರಿ, ಆಹಾರ ಧ್ಯಾನ್ಯಗಳನ್ನು ಈ ಪ್ರದೇಶಗಳಿಂದ ಪೂರೈಯಿಸಲಾಗುತ್ತಿತ್ತು ಎಂಬುದು ಸ್ಥಳೀಯ ಮಾಹಿತಿಗಳಿಂದ ತಿಳಿದುಬರುತ್ತದೆ. ಯುದ್ಧ ಸಾಮಗ್ರಿಗಳಾದ ಖಡ್ಗ, ಗುರಾಣಿ, ಈಟಿ, ಬಾಕು, ಕತ್ತಿ ಮುಂತಾದವುನ್ನು. ಈ ಪ್ರದೇಶದ ಊದುಕುಲುಮೆಗಳಿಂದ ತಯಾರಿಸಿಕೊಳ್ಳುತ್ತಿದ್ದರು. ಎಂಬ ವಿಷಯ ಇತಿಹಾಸತಜ್ಞರ ಅಭಿಪ್ರಾಯವಾಗಿದೆ. ಕೂಡ್ಲಿಗಿ ತಾಲೂಕಿನಲ್ಲಿ ಬೇಡ ಬುಡಕಟ್ಟಿನ ಜನರು ಹೆಚ್ಚಾಗಿ ಕಂಡುಬರುವುದರಿಂದ ದೈಹಿಕವಾಗಿ ಬಲಿಷ್ಠ, ಎದೆಗಾರಿಕೆಯ ವೀರರಾಗಿದ್ದರಿಂದ ಅರಸರು ಈ ಭಾಗದ ಜನರನ್ನು ತಮ್ಮ ಯುದ್ಧಗಳಲ್ಲಿ ಬಳಸಿಕೊಳ್ಳುತ್ತಿದ್ದರು. ಅಂತಹುಗಳಲ್ಲಿ ವಿರುಪಾಪುರ, ಕೂಡ್ಲಿಗಿ, ಜರಿಮಲೆ, ಗುಡೆಕೋಟೆ ಮುಂತಾದ ಗ್ರಾಮದವರು ಸೇರಿದ್ದರು ಎನ್ನಲಾಗುತ್ತದೆ. ಹಾಗಾಗಿ ಕೂಡ್ಲಿಗಿ ತಾಲೂಕಿನ ಪಾಳೆಗಾರರು ವಿಜಯನಗರಕ್ಕೆ ನಿಷ್ಠೆಯಿಂದ ನಡೆದುಕೊಂಡರು. ಕ್ರಿ.ಶ. ೧೫೬೫ರ ರಕ್ಕಸತಂಗಡಗಿ ಯುದ್ಧದ ತರುವಾಯ ಅನಾಥವಾದ ವಿಜಯನಗರ ಸಾಮ್ರಾಜ್ಯ ತನ್ನ ಗತವೈಭವವನ್ನು ಮರುಕಳಿಸಲಾಗಲಿಲ್ಲ, ಪಾಳೇಗಾರರೆಲ್ಲ ಸ್ವತಂತ್ರರಾದರು. ಅದರಲ್ಲೂ ಇವರಲ್ಲಿ ನಾಯಕ ಜನಾಂಗದ ಪಾಳೆಗಾರರು ಸಂಡೂರಿನವರು ಮಾತ್ರ ಮರಾಠಿ ಮೂಲದವರು. ಬಳ್ಳಾರಿ ಜಿಲ್ಲೆಯ ಹಾಗೂ ರಾಯದುರ್ಗ ಮತ್ತು ಚಿತ್ರದುರ್ಗ ಪಾಳೆಗಾರರಲ್ಲಿ ವೈವಾಹಿಕ ಸಂಬಂಧಗಳಾಗಿದ್ದವು. ಹಲವಾರು ಸಾರಿ ಪರಸ್ಪರ ದ್ವೇಷ ಹೋರಾಟಗಳು ನಡೆಯುತ್ತಿದ್ದವು. ಯಾರು ಸಹ ಸ್ವತಂತ್ರರಾಜ್ಯ ಸ್ಥಾಪನೆ ಹಾಗೂ ವಿಸ್ತಾರಗಳನ್ನು ಮಾಡುವಷ್ಟು ಸಮರ್ಥರಾಗಲಿಲ್ಲ. ದೊಡ್ಡ ರಾಜ್ಯದ ವಿರುದ್ಧ ಹೋರಾಡಿದರೂ ಅದು ತಾತ್ಕಾಲಿಕವಾಗಿರುತ್ತಿತ್ತು.

ಉದಾಹರಣೆಗೆ ಬಳ್ಳಾರಿ ಕೋಟೆಯನ್ನು ಶಿವಾಜಿ ಮುತ್ತಿದಾಗ ಪಾಳೇಗಾರರ ವಿಧವೆ ಪತ್ನಿ ೨೭ ದಿನಗಳ ವರೆಗೆ ಸೋಲದೆ ಹೋರಾಡಿದಳು. ಪೇಶ್ವೆ ಬಾಜೀರಾವ್ ಸಂಡೂರನ್ನು ಮುತ್ತಿದಾಗ ಗೆಲ್ಲಲಾಗಲಿಲ್ಲ. ಕೂಡ್ಲಿಗಿಯಿಂದ ಸಮೀಪವಾಗಿರುವ ವೀರನ ದುರ್ಗವನ್ನು ಒಮ್ಮೆ ಟಿಪ್ಪು ಮುತ್ತಿ ವಶಪಡಿಸಿಕೊಳ್ಳಲಾಗದೆ ಸೋತು ಹೋದ.

## ಗುಡೆಕೋಟೆ ಪಾಳೆಗಾರರು

ಗುಡೆಕೋಟೆ ಪಾಳೆಗಾರರು ಕ್ರಿ.ಶ.೧೪೨೮(೧೫೦೯)ನೇ ಪ್ರಭವನಾಮ ಸಂವತ್ಸರ ಕಾರ್ತಿಕ ಶುದ್ಧ ದ್ವಾದಶಿಯೆಂದು ರಾಜ್ಯಸ್ಥಾಪನೆಯ ವಿಷಯ ತಿಳಿಯುತ್ತದೆ. ಕ್ರಿ.ಶ.೧೫೦೬ರ ಸುಮಾರಿಗೆ ಗುಡೆಕೋಟೆ ಸಂಸ್ಥಾನದ ಗಂಡಳನಾಯಕರ ನೇತೃತ್ವದಲ್ಲಿ ಸ್ಥಾಪನೆಯಾಯಿತಂತೆ. ಇವನು ಕುಮಾರರಾಮನ ಸ್ನೇಹಿತನಾದ ಗಡಿಯಾಂಕ ಭೀಮನ ವಂಶದವನು. ಹೀಗಿದ್ದರೂ ಗಡಿವಂತ(ಯಾಂಕ) ಭೀಮ ಗಂಡಳನಾಯಕ ಮತ್ತು ಹಿರೇಭೋಮ್ಮಂತ ನಾಯಕರೇ ಮೂಲಪುರುಷರು ಎನ್ನಬಹುದು. ಗಂಡಳನಾಯಕ (೧೫೦೯–೧೫೨೧) ೧೫ ವರ್ಷ ಆಳ್ವಿಕೆ ಮಾಡಿದ ನಂತರ ಪೆನ್ನಪ್ಪನಾಯಕ (೧೫೨೧–೧೫೪೧), ಪಾಳೆನಾಯಕ (೧೫೪೧–೧೫೫೮), ಕೆಮ್ಮಯ್ಯರಾಜ (೧೫೫೮–೧೯೦೨), ರಾಮಪ್ಪ ನಾಯಕ (೧೯೦೨–೧೯೩೪) ಆಳ್ವಿಕೆಮಾಡಿದ ಉಲ್ಲೇಖವಿದೆ. ಪ್ರಮುಖವಾಗಿ ಬೋಮ್ಮಂತರಾಜನ ಹೆಸರು ಗುಡೆಕೋಟೆಯ ಚರಿತ್ರೆಯ ಪ್ರಾತಃ ಸ್ಮರಣೀಯ. ರಾಮಪ್ಪನಾಯಕನ ಹಿರಿಮಗನ ಬೋಮ್ಮಂತರಾಜ (೧೬೩೭–೧೬೭೬) ಇವನು ಗುಡೆಕೋಟೆ, ಸಂಡೂರು, ಪೊಗದಿಕೊಟ್ಟ ಆಂಧ್ರಬಾಗದ ಹಳ್ಳಿಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡಿದ್ದನು.[೨೩] ಅದರಲ್ಲಿ ರಾಯದುರ್ಗವು ಸೇರಿತು. ಮೊಳಕಾಲ್ಮೂರು, ಚಳ್ಳಕೆರೆ, ಜಗಳೂರು, ಕೂಡ್ಲಿಗಿ ಪ್ರದೇಶಗಳು ಇವನ ವ್ಯಾಪ್ತಿಗೆ ಸೇರಿದವು. ಈ ಅಂಶ ಗಮನಿಸಿದರೆ ಯಾವುದೇ ಒಂದು ಗ್ರಾಮ, ಊರು, ಒಬ್ಬ ಅರಸನ ವ್ಯಾಪ್ತಿಗೆ ಒಳಪಡಬೇಕಾದರೆ ಆ ಊರುಗಳು ಹಿಂದಿನಿಂದ ಬೆಳೆದು ಬಂದಿರಬೇಕಾಗುತ್ತದೆ. ಶತಮಾನಗಳಷ್ಟು ಇತಿಹಾಸ ಹೊಂದಿರುತ್ತವೆ. ಹಾಗೂ ಕೂಡ್ಲಿಗಿಯನ್ನು ಒಳಗೊಂಡಂತೆ ಹೋಬಳಿ, ಗ್ರಾಮಗಳು ಕುಮಾರರಾಮನ ಕಾಲದಲ್ಲಿ ಬೆಳವಣಿಗೆ ಹೊಂದಿ ವಿಜಯನಗರದ ವೇಳೆಗೆ ಚೇತರಿಸಿಕೊಂಡು ಪಾಳೆಗಾರರ ಕಾಲಕ್ಕೆ ಗುರುತಿಸಿಕೊಂಡಂತೆ ಕಂಡುಬರುತ್ತವೆ.

## ಜರಿಮಲೆ ಪಾಳೆಗಾರರು

ಕಾನಾಹೊಸಹಳ್ಳಿ ಗ್ರಾಮದಿಂದ ಸುಮಾರು ೩೦ ಕಿ.ಮೀ. ಅಂತರದಲ್ಲಿರುವ ಈ ಜರಿಮಲೆ ಕೂಡ್ಲಿಗಿ ತಾಲ್ಲೂಕಿನ ಕೇಂದ್ರಸ್ಥಾನವಾದ ಕೂಡ್ಲಿಗಿಯೊಂದಿಗೆ ಚಾರಿತ್ರಿಕ ಸಂಬಂಧ ಹೊಂದಿರುವ ಅಂಶಗಳು ಈವರೆಗೆ ದೊರೆತಿರುವ ಅಂಶಗಳಿಂದ ತಿಳಿದುಬರುತ್ತದೆ. ಜರಿಮಲೆ ನಾಯಕ ಪಾಳೆಗಾರರ ಮೂಲ ಕೆದಕುವುದಾದರೆ ಜರಿಮಲೆ ಮೂಲಪುರುಷ ಆಂಧ್ರದ ಕಂಚಿ, ಕದ್ರಿಯಿಂದ ಬಂದವರೆಂದು ಹೇಳಲಾಗುತ್ತದೆ. ಇನ್ನೊಂದು ಮೂಲದ ಪ್ರಕಾರ ಕುಮಾರರಾಮನ ವಂಶಜರೆಂದು ತಿಳಿಯುತ್ತದೆ. ಎಂ.ಎಂ.ಕಲ್ಬುರ್ಗಿಯವರ ಕರ್ನಾಟಕದ ಕೈಫಿಯತ್ತಿನಲ್ಲಿ ಕಣಕುಪ್ಪೆ, ಕೋಟೆಕಟ್ಟಿ, ಚಿಕ್ಕಣ್ಣನಾಯಕ ಪಟ್ಟ ಮಾಡಿಕೊಂಡ ನಂತರ ದುರ್ಗ (ಚಿತ್ರದುರ್ಗ)ಕ್ಕೆ ಹೋಗುವಾಗ ದಾರಿಮಧ್ಯೆ ಗುಡ್ಡದಲ್ಲಿ ಗಿಡಮರಗಳು ಬಹಳ. ಜರಿಮಲೆ ಬೇಡರು ಈ ಗುಡ್ಡದಲ್ಲಿದ್ದ ೨೦ ಜನ ಕಳ್ಳರು ಸೇರಿಕೊಂಡು ಬಹು ಉಪದ್ರವ ಮಾಡುತ್ತ ಇದ್ದಲ್ಲಿ ಕುಮಾರಪ್ಪ ಅವರು ಮುನ್ನೂರು, ನಾನ್ನೂರು ಜನ ತೆಗೆದುಕೊಂಡು ಹೋಗಿ ಈ ಗುಡ್ಡದಲ್ಲಿ ಇದ್ದಂತಹ ಕಳ್ಳರನ್ನು ಕೆಲವರು ಸಿಕ್ಕಿದವರನ್ನು ಹೊಡೆದುಹಾಕಿದರು. ಕೆಲವರು ಓಡಿಹೋದರು. ಅಲ್ಲಿ ಗುಡ್ಡಕ್ಕೆ ಕೋಟೇಕಟ್ಟಿದಾಗ ಗುಡೆಕೋಟೆಯಾಯಿತೆಂದು ಹೇಳಲಾಗಿದೆ.[೨೪]

ಗುಡೆಕೋಟೆ ಪಾಳೆಗಾರರಿಗಿಂತ ಪೂರ್ವದಲ್ಲಿಯೇ ಜರಿಮಲೆ ಸ್ಥಾಪನೆಯಾದಂತಿದೆ. ವಿಜಯನಗರದ ಅರಸರು ಕ್ರಿ.ಶ.೧೫೬೪ರ ಸುಮಾರಿಗೆ ತಮ್ಮ ಅಧೀನದಲ್ಲಿದ್ದ ತಳವಾರ, ಫೌಜುದಾರ ಮೊದಲದವರಿಗೆ ಆಯಾ ಸ್ಥಳಗಳಲ್ಲಿ ನಡೆಸುತ್ತಿದ್ದ ಅಧಿಕಾರವನ್ನು ಅವರಿಗೆ ಬಿಟ್ಟುಕೊಟ್ಟರು. ಅದರಂತೆಯೇ ಭೋಮ್ಮಂತರಾಜ ಕುಮಾರರಾಮನ ವಂಶಕ್ಕೆ ಸೇರಿರಬಹುದು ಎನ್ನಲಾಗಿದೆ. ಹಿಂದೆ ಮಾಡಿಕೊಂಡು ಬಂದಿದ್ದ ನಾಡತಳವಾರಿಕೆಯನ್ನು ಕಾವಲಿಯನ್ನು ದಯಪಾಲಿಸಬೇಕೆಂದು ಕೇಳಿಕೊಂಡಾಗ ಎಂಟು ಸ್ಥಳಗಳನ್ನು ಬಿಟ್ಟುಕೊಟ್ಟರು. ಅವನಿಗೆ ಏಳು ಜನ ಮಕ್ಕಳಾದರು. ಮಲ್ಲಿಕಾರ್ಜುನ ನಾಯಕ ಜರಿಮಲೆ ಆಳುತ್ತಿದ್ದ. ಇವನ

ಕಾಲದಲ್ಲಿ ಬದಲಾವಣೆಗಳಾದವು. ಜರಿಮಲೆ ಸಂಸ್ಥಾನದ ಮೂಲ ಪುರುಷ ಪಾಪಣ್ಣನಾಯಕ (ಪಾಪನಾಯಕ), ವಿಜಯನಗರದ ಸಾಳ್ವ ವೀರ ನರಸಿಂಹನ (೧೪೯೧-೧೫೦೫) ಸೇವಕನಾಗಿದ್ದನಂತೆ. ತನ್ನ ಸೇವೆ ನಿಷ್ಠೆಯಿಂದ ಅರಸನಿಗೆ ಒಪ್ಪಿತನಾಗಿದ್ದ ಈತ ಕಾಂಚಿಪುರಂಗೆ ಹೋದಾಗ ಆತನೊಡನಿದ್ದು ವಿಶ್ವಾಸಕ್ಕೆ ಪಾತ್ರನಾದ. ವಿಜಯನಗರದಲ್ಲಿ ನಡೆಯುತಿದ್ದ ಗಲಭೆ-ಸಂಘರ್ಷಗಳನ್ನು ಅಡಗಿಸಲು ಈತ ಸಿದ್ಧನಾದನು. ಪಾಪಣ್ಣನಿಗೆ ವಡ್ಡು, ದರೋಜಿಗಳು ಅರಸನಿಂದ ಬಳುವಳಿಯಾಗಿ ಬಂದವು. ಮೆಕೆಂಜಿಯ ದಾಖಲೆಗಳಲ್ಲಿ ಪಾಪಣ್ಣನಾಯಕನೆಂದು, ಇತರೆ ಆಕರಗಳಲ್ಲಿ ಪೆನ್ನಪ್ಪನಾಯಕನೆಂದು. ಇವರ ಮೂಲವಂಶಿಕರನ್ನು ಹೆಸರಿಸಲಾಗಿದೆ. ಪಾಪಣ್ಣನಾಯಕ ಪೆನ್ನಪ್ಪನಾಯಕನ ತಂದೆಯಾಗಿರಬೇಕು. ಇವರು ಆಂಧ್ರದ ಕದ್ರಿಯಿಂದ ವಲಸೆ ಬಂದವರು ಎಂಬುದನ್ನು ಉಲ್ಲೇಖಿಸಲಾಗಿದೆ. ಆರಂಭದಲ್ಲಿ ಹೊಸ ಸ್ಥಳದಲ್ಲಿನ ಜೀವನ ಕಷ್ಟವಾದ್ದರಿಂದ ಎರಡನೇ ತಲೆಮಾರಿನವರು ಆಳ್ವಿಕೆಗೆ ಮುಂದಾಗಿರಬೇಕು.[೨೫]

ಪೆನ್ನಪ್ಪ ನಾಯಕ ತನ್ನ ತಂದೆಗೆ ಬಳುವಳಿಯಾಗಿ ಬಂದಿದ್ದ ಗ್ರಾಮಗಳಿಗೆ ಒಡೆಯನಾಗುತ್ತಾನೆ. ಇದಕ್ಕೆ ವಿಜಯನಗರದ ಅರಸ ಅಚ್ಚುತದೇವರಾಯ (೧೫೨೯-೧೫೪೨)ನಿಂದ ಜಹಗೀರ್ ಸಹ ಲಭಿಸಿತ್ತು. ಈ ಐತಿಹಾಸಿಕ ಸ್ಥಳದಲ್ಲಿ ಪೆನ್ನಪ್ಪನಾಯಕ ಕೋಟೆ ನಿರ್ಮಿಸಿ ಆಳುತ್ತಾನೆ. ಸಂಡೂರು ಪ್ರದೇಶವು ಇವನಿಗೆ ಸೇರಿತ್ತು. ಸಿದ್ದೋಜಿ ಗೋರ್ಪಡೆಯ ನಂತರ ಸಂಡೂರು ಪ್ರದೇಶ ಜರಿಮಲೆಗೆ ಕೈತಪ್ಪಿತ್ತು. ವೀರ ನರಸಿಂಹನು(೧೫೦೫-೧೫೦೯) ಗುಡೆಕೋಟೆ, ಮಲೆಭೂಪ ಸಮುದ್ರ ಗ್ರಾಮಗಳನ್ನು ಇವನಿಗೆ ಬಿಟ್ಟುಕೊಡುತ್ತಾನೆ. ಅಚ್ಚುತರಾಯ ಜರಿಮಲೆ ಪೆನ್ನಪ್ಪನಿಗೆ ೫೦೦ ಅಶ್ವದಳ, ೩೦೦ ಕಾಲ್ದಳಪಡೆ ಇಟ್ಟುಕೊಳ್ಳಲು ಅನುಮತಿ ನೀಡಿದ ೩೫.೧೫೦ ಮಹಮ್ಮದ್ ಶಾಹಿ ಪಗೋಡ ಆದಾಯ ಇರುವ ಮತ್ತೆರಡು ಹೆಚ್ಚಿಗೆ ಮಾಗಾಣಿಗಳನ್ನು ನೀಡಿದ್ದಾನೆಂದು ಮನ್ರೋ ವರದಿಗಳಿಂದ ತಿಳಿದುಬರುತ್ತದೆ. ಕೃಷ್ಣದೇವರಾಯನ ನಂತರ ರಾಜಕೀಯದಲ್ಲಿ ಅನೇಕ ಪಲ್ಲಟಗಳಾದವು. ಅಚ್ಚುತರಾಯ ತನ್ನ ಸಂಸ್ಥಾನಗಳ ಮೇಲೆ ಮಹಮ್ಮದ್‌ಯಿಯರ ಆಕ್ರಮಣವನ್ನು ತಡೆಯಲು ಯೋಜನೆಗಳನ್ನು ಕೈಗೊಂಡನು. ಅದರಂತೆ ಕನಕಗಿರಿ, ರಾಯದುರ್ಗ, ಸಿರಾ, ಬಸವಪಟ್ಟಣ, ಉಜ್ಜಿನಿ ಮೊದಲಾದ ಕೇಂದ್ರಗಳ ನಾಯಕರಿಗೆ ಬಿಗಿಭದ್ರತೆಯಿಂದ ಇರುವಂತೆ ಆದೇಶಿಸಿದ. ಇದರಂತೆ ಬಳ್ಳಾರಿ, ಗುತ್ತಿ, ಸಿರಾ, ಬಸವಪಟ್ಟಣ, ಪಾವಗಡ, ಕಣಕುಪ್ಪೆ, ಕುಂದರ್ಷಿ, ನಾರಾಯಣ ದೇವರ ಕೆರೆ, ಡಣಾಯಕನ ಕೆರೆ, ಸಂಡೂರು, ಕುಡುತಿನಿ, ಪಾಳೇಗಾರರಿಗೆ ಸಜ್ಜಾಗಾಲು ತಿಳಿಸಿದ. ಸುಲ್ತಾನರ ಒಳಸಂಚು ದಾಳಿ ತಪ್ಪಿಸಲು ನಾಯಕರ ಸಹಾಯಕ್ಕೆ ಮುಂದಾದ ಪೆನ್ನಪ್ಪನಾಯಕನು ಕಣಕುಪ್ಪೆ, ಕೂಡ್ಲಿಗಿ, ನಾರಾಯಣದೇವರ ಕೆರೆ, ಡಣಾಯಕನ ಕೆರೆ, ಸಂಡೂರು ಪ್ರದೇಶಗಳನ್ನು ತನ್ನ ವಶದಲ್ಲಿಟ್ಟುಕೊಳ್ಳುತ್ತಾನೆ. ಪೆನ್ನಪ್ಪ ಉಜ್ಜಿನಿಯಲ್ಲಿರುವಾಗ ಬಸವಂತರಾಜ ಭೂಮಿರಾಜ, ಬೂದಿಸಿದ್ದರಾಜ ಎಂಬ ಮೂರು ಜನ ಮಕ್ಕಳು. ತಂದೆಯ ಆಜ್ಞೆಯಿಂದ ರಾಜ್ಯಪರಿಪಾಲಿಸುತ್ತಿದ್ದರು

ಭೂಮಿರಾಜ ಅಪ್ರತಿಮ ಶಕ್ತಿಶಾಲಿ, ಸಾಹಸದೊರೆ. ವಿಜಯಪುರದ ಬಾದ್ ಷಾಹನ್ ಕುದುರೆ ಮೇಲೆ ಸವಾರಿ ಮಾಡಿ ಪಳಗಿಸಿ 'ಜಮ್ಮುದಾದ ಗುಡ್ಡಯ್ಯ, ಜರಿಮಲ್ಲ' ಎಂಬ ಬಿರುದು ಪಡೆದು ವಾಪಸ್ಸಾದ. ಜೊತೆಗೆ ನಾಲ್ಕು ಮಾಗಾಣಿಗಳು, ರೂ೨೦೦೦ ಕಾಣಿಕೆ, ೨೦೦ ಕಾಲಾಳು, ೩೦೦ ಅಶ್ವದಳಗಳನ್ನು ಇಟ್ಟುಕೊಳ್ಳಲು ಅನುಮತಿಸಿದ್ದ. ಸುಲ್ತಾನ ಭೂಮಿರಾಜ ಸುಲ್ತಾನನ ಸ್ನೇಹಕ್ಕೆ ಮೆಚ್ಚುಗೆಯಿಂದಲೇ ಆಳುತ್ತಿದ್ದ. ಆ ಕಾಲದಲ್ಲಿ ಯುದ್ಧ, ಸಂಘರ್ಷಗಳು, ಹೊಂದಾಣಿಕೆಗಳು ಆಗಿ ಸುಲ್ತಾನನ ವಿರೋಧಿಯಾಗಿ ಜರಿಮಲೆಯಲ್ಲಿ ಇಮ್ಮಡಿನಾಯಕ ಅಧಿಕಾರಕ್ಕೆ ಬಂದಾಗ ಸುಲ್ತಾನ ಉಜ್ಜಿನಿಗೆ ಮುತ್ತಿಗೆ ಹಾಕಿದ. ಜರಿಮಲೆ ನಾಯಕನನ್ನು ಶಿಕ್ಷಿಸಿದ. ಮರಳಿ ಉಜ್ಜಿನಿ ಪಡೆಯಲು ಇಮ್ಮಡಿನಾಯಕನ ಹತ್ತಿರ ಧನವಿರಲಿಲ್ಲ, ಇದೇ ಸಂದರ್ಭದಲ್ಲಿ ಹರಪನಹಳ್ಳಿ ನಾಯಕರು ವಿಜಯಪುರದ ಸುಲ್ತಾನರಿಗೆ ೨೦೦ ಪಗೋಡಕೊಟ್ಟು ಉಜ್ಜಿನಿಯನ್ನು

ಪಡೆದುಕೊಂಡರು. ಹೀಗೆ ನಾಯಕ ಕೂಡ್ಲಗಿ(ಕೂಡ್ಲಿಗಿ)ಗೆ ಬರುತ್ತಿರುವಾಗ ಚಿತ್ರದುರ್ಗದವರು ಕಣಕುಪ್ಪೆಯನ್ನು ಆಕ್ರಮಿಸಿಕೊಂಡರು. ಕೊನೆಗೆ ದುರ್ಗದವರೊಂದಿಗೆ ಸ್ನೇಹ ಗಳಿಸಿದ ಇಮ್ಮಡಿನಾಯಕ ಕೂಡ್ಲಿಗಿಯಿಂದ ಭೂಪಸಮುದ್ರಕ್ಕೆ ರಾಜ್ಯಧಾನಿಯನ್ನು ವರ್ಗಾಯಿಸಿದ. ಆಗ ಹರಪ್ಪನಹಳ್ಳಿ ನಾಯಕರು ಕೂಡ್ಲಿಗಿಯನ್ನು ಪಡೆದುಕೊಂಡು ವೀರನ ದುರ್ಗ ಸೇರಿ, ತನ್ನ ರಾಜ್ಯಕ್ಕೆ ಸೇರಿಸಿಕೊಂಡರು.[೨೬] ಅಲ್ಲದೇ ಹಿಂದೆ ಕಾನಾಹೊಸಹಳ್ಳಿಯ ಉಪಗ್ರಾಮವಾಗಿದ್ದಂತಹ 'ದೊಂಬರಹಳ್ಳಿ'ಯಲ್ಲಿ ದೊರೆತಿರುವ ಶಾಸನದಲ್ಲಿ ವಿಮಿಡಿ–ನಾಯಕನು ಯೆಲೆ ಮಂಚುವಿನ ಗುರಮ್ಮನಿಗೆ ಒಂದು ಗ್ರಾಮವನ್ನು ದಾನ ನೀಡಿದ್ದನೆಂದು ಉಲ್ಲೇಖ ಗೊಂಡಿದೆ.[೨೭] ಈ ಶಾಸನದ ಮೂಲಕ ವಿಮಿಡಿ–ನಾಯಕ(ಇಮ್ಮಡಿನಾಯಕ) ಜರಿಮಲೆ ಸಂಸ್ಥಾನದ ಪಾಳೇಗಾರನಾಗಿದ್ದು ತಿಳಿದುಬರುತ್ತದೆ. ಆದ್ದರಿಂದ ಈ ಎಲ್ಲ ಅಂಶಗಳನ್ನು ಗಮನಿಸಿದಾಗ ಕಾನಾಹೊಸಹಳ್ಳಿ ಪರಿಸರವು ಸಹ ಕೂಡ್ಲಿಗಿ ತಾಲೂಕಿನಲ್ಲಿರುವುದರಿಂದ ಈ ಪಾಳೇಗಾರರ ಪ್ರಭಾವಕ್ಕೆ ಒಳಗಾಗಿದ್ದ ಗ್ರಾಮವಾಗಿತ್ತು ಎಂದು ಗುರುತಿಸಬಹುದು.

## ಅಡಿಟಿಪ್ಪಣಿಗಳು

೧. ನಾಡಕಚೇರಿ ಮಾಹಿತಿ.
೨. ನಾಡಕಚೇರಿ ಮಾಹಿತಿ.
೩. ೨೦೧೧ರ ಜನಗಣತಿ ವರದಿ.
೪. ಕ್ಷೇತ್ರಕಾರ್ಯ ವರದಿ.
೫. ಶ್ರೀನಿವಾಸ ಎಲ್. 'ಹಂಪಿ ಪರಿಸರದ ಆದಿಮಾನವನ ನೆಲೆಗಳು' ಪುಟ-೫೩
೬. ಅದೇ, ಪುಟ-೪೭.
೭. ಅದೇ, ಪುಟ-೨೯.
೮. ಕ್ಷೇತ್ರಕಾರ್ಯ ವರದಿ.
೯. ಶ್ರೀನಿವಾಸ ಎಲ್. 'ಹಂಪಿ ಪರಿಸರದ ಆದಿಮಾನವನ ನೆಲೆಗಳು' ಪುಟ-೫೯.
೧೦. ಅದೇ, ಪುಟ-೫೩.
೧೧. ತಿಪ್ಪೇಶ ಎಚ್.ಎಂ. ಹುರುಳಿಹಾಳ್ ಮತ್ತು ಮಾಳೆಹಳ್ಳಿಯ ಬೃಹತ್ ಶಿಲಾಯುಗದ ಅವಶೇಷಗಳು. ಲೇಖನ ವರದಿ.
೧೨. ಶ್ರೀನಿವಾಸ ಎಲ್. "ಹಂಪಿ ಪರಿಸರದ ಆದಿಮಾನವನ ನೆಲೆಗಳು' ಪುಟ-೪೭.
೧೩. ಅದೇ, ಪುಟ-೫೯.
೧೪. ವೃಷಭೇಂದ್ರಾಚಾರ್ 'ಮುನ್ನಡೆಯ ಕೂಡ್ಲಿಗಿ' ಪುಟ-೦೯.
೧೫. ಅದೇ, ಪುಟ-೯.
೧೬. ಅದೇ, ಪುಟ-೯.
೧೭. ವಾಸುದೇವ ಬಡಿಗೇರ್ 'ಕಾರ್ತಿಕೇಯ ತಪೋವನ' ಪುಟ-೧೦.
೧೮. ವೃಷಭೇಂದ್ರಾಚಾರ್ 'ಪೂರ್ವೋಕ್ತ' ಪುಟ-೧೦.
೧೯. ಅದೇ, ಪುಟ-೧೦.
೨೦. ಅದೇ, ಪುಟ-೧೦.
೨೧. ಅದೇ, ಪುಟ-೧೦.
೨೨. ಅದೇ, ಪುಟ-೧೨.
೨೩. ಜೋಷಿ ಎಸ್.ಕೆ. 'ಕರ್ನಾಟಕದ ಕೋಟೆ-ಕೊತ್ತಲಗಳು' ಪುಟ-೧.
೨೪. ಚನ್ನಬಸಪ್ಪ ಎಸ್. 'ಪಾಟೀಲ್ ಕರ್ನಾಟಕದ ಕೋಟೆಗಳು' ಪುಟ-೧.
೨೫. ಕೊಟ್ರೇಶ್ ಎಂ. ಕೋಟೆ-ಕೊತ್ತಲಗಳು ಒಂದು ಅಧ್ಯಯನ ಪಿಎಚ್.ಡಿ ಮಹಾಪ್ರಬಂಧ ಪುಟ-೧೪
೨೬. ಅದೇ, ಪುಟ-೨೩.
೨೭. ಚನ್ನಬಸಪ್ಪ ಎಸ್.ಪಾಟೀಲ್, ವಿನೋದ ಪಾಟೀಲ್ ಬಳ್ಳಾರಿಜಿಲ್ಲೆಯ ಶಾಸನಗಳು ಪುಟ-೧೫೩

# ಅಧ್ಯಾಯ – ಮೂರು
## ಸ್ಥಳನಾಮ ಮತ್ತು ಐತಿಹ್ಯಗಳು

ಸ್ಥಳದ ಹೆಸರು ಸಾಮಾನ್ಯವಾಗಿ ಅಲ್ಲಿನ ಭೌಗೋಳಿಕ ಹಾಗೂ ಸಾಂಸ್ಕೃತಿಕ ವೈಶಿಷ್ಟ್ಯತೆಯ ಲಕ್ಷಣದಿಂದ ಕೂಡಿರುತ್ತವೆ. ಸ್ಥಳನಾಮದ ಅಧ್ಯಯನದ ಸಂದರ್ಭದಲ್ಲಿ ಅಲ್ಲಿನ ಸನ್ನಿವೇಶಗಳನ್ನು ಗುರುತಿಸುವುದು ಅವಶ್ಯಕವಾಗಿರುತ್ತದೆ. ಯಾವುದೋ ಒಂದು ನಿರ್ದಿಷ್ಟ ಕಾಲದಲ್ಲಿ ತಲೆ ಎತ್ತಿದ ಹೆಸರಿನಲ್ಲಿ ಆ ಪರಿಸರದ ವಿಶೇಷತೆ ಇರುತ್ತದೆ. ಈ ತರನಾದ ಮೂಲಭೂತ ಅಂಶವೇ ಸ್ಥಳನಾಮಗಳ ಹುಟ್ಟಿನ ಹಿಂದಿನ ರಹಸ್ಯವಾಗಿದ್ದು. ಅವು ಶಾಶ್ವತವಾಗಿ ಉಳಿಯುವ ಕ್ರಿಯಾಶಕ್ತಿಯಾಗಿದೆ. ಕೆಲವೊಮ್ಮೆ ಸ್ಥಳನಾಮಗಳು ಚಾರಿತ್ರಿಕ ವ್ಯಕ್ತಿ, ಅಧಿಕಾರಿ, ಕುಲದೇವತೆ ಅಥವಾ ಚಾರಿತ್ರಿಕ ಮಹತ್ವದ ಘಟನೆಗಳನ್ನು ಸ್ಮರಿಸುವ ಉದ್ದೇಶದಿಂದ ಸ್ಥಳನಾಮಗಳು ಹುಟ್ಟಿಕೊಂಡಿರುತ್ತವೆ. ಎಂ.ಎಂ.ಕಲ್ಬುರ್ಗಿಯವರು ಗುರುತಿಸಿರುವಂತೆ ಗ್ರಾಮಗಳ ಹೆಸರಿನ ಬಗೆಗೆ ಮೂರು ನಿಷ್ಪತ್ತಿಗಳು ಈ ಕೆಳಗಿನಂತಿವೆ.

೧. ಪಾಮರ ನಿಷ್ಪತ್ತಿ (ಜಾನಪದ ನಿಷ್ಪತ್ತಿ)
೨. ಪಂಡಿತ ನಿಷ್ಪತ್ತಿ
೩. ನಿಜ ನಿಷ್ಪತ್ತಿ

ಇವುಗಳಲ್ಲಿ ಮೊದಲಿನ ಎರಡು ಕಲ್ಪಕತೆ, ಮೂರನೆಯದು ಸತ್ಯವಾಗಿರುತ್ತದೆ. ಮೊದಲ ಮತ್ತು ಎರಡನೆಯ ನಿಷ್ಪತ್ತಿಗೆ ಹಲವಾರು ಕತೆಗಳು ಕೇಳಿಬಂದರೆ ನಿಜ ನಿಷ್ಪತ್ತಿಗೆ ಒಂದೇ ನಾಮ ಇರುತ್ತದೆ. ಕೆಲವು ಶಾಸನಗಳಲ್ಲಿ ಉಲ್ಲೇಖಿಸಿದರೆ ಇನ್ನು ಕೆಲವು ಶಾಸನಗಳಲ್ಲಿ ಉಲ್ಲೇಖಗೊಂಡಿರುವುದಿಲ್ಲ.[೧]

ಸ್ಥಳನಾಮ ಅಧ್ಯಯನವು ಈ ಪರಿಸರದಲ್ಲಿನ ಅಧ್ಯಯನಕ್ಕೆ ಕೆಲವೊಂದು ಗ್ರಾಮಗಳು ಯಾವ ಕಾಲದ್ದು ಯಾವ ಹೆಸರುಗಳನ್ನು ಪಡೆದವು, ಏಕೆ ಪಡೆದವು ಇಂದಿನ ಹೆಸರು ಮುಂತಾದ ವಿಷಯ ಕುರಿತು ಚರ್ಚಿಸುತ್ತದೆ. ಸ್ಥಳನಾಮ ಯಾವ ಅಂಶ ಆಧಾರಿಸಿ ನಿರ್ಧಾರವಾಗಿತ್ತು ಎಂಬುದನ್ನು ತಿಳಿಯುವುದಲ್ಲದೇ ಒಂದು ಜನಾಂಗ, ಸಂಸ್ಕೃತಿ, ಧರ್ಮ ಅಲ್ಲಿನ ಜೀವನ ಕ್ರಮ ಮುಂತಾದ ಅನೇಕ ವಿಚಾರಗಳ ಮೇಲೆ ಬೆಳಕು ಚೆಲ್ಲುತ್ತವೆ. ದೇ.ಜ.ಗೌ ಅವರು ಸ್ಥಳನಾಮ ವಿಶೇಷಗಳ ೧೦ ಬಗೆಯ ವರ್ಗೀಕರಣವನ್ನು ಪರಿಚಯಿಸಿದ್ದಾರೆ. ಅವುಗಳ ಆಧಾರದ ಮೇಲೆ ಕಾನಾಹೊಸಹಳ್ಳಿ ಗ್ರಾಮದ ಕುರಿತು ಸ್ಥಳನಾಮ ಚರಿತ್ರೆ ತಿಳಿಯುವಂತೆ ಪ್ರಸ್ತುತ ಈ ಅಧ್ಯಾಯದಲ್ಲಿ ಮಾಡಲಾಗಿದೆ.

೧. ಸಸ್ಯವಾಚಕ
೨. ಧಾರ್ಮಿಕ ಭಾವಸೂಚಿ
೩. ವ್ಯಕ್ತಿಯ ದೇವತಾ ಸಂಬಂಧಿವಾಚಕ
೪. ಶಿಲಾವಾಚಕ
೫. ಜಲಸಂಬಂಧಿ
೬. ಧ್ವನಿಪ್ರತ್ಯಯ
೭. ವ್ಯಕ್ತಿವಾಚಕ

**ಕಾನಾಹೊಸಹಳ್ಳಿ**

ಮೊದಲಿಗೆ ಈ ಪ್ರದೇಶದಲ್ಲಿ ದಟ್ಟವಾದ ಕಾಡು ಇತ್ತು. ನಂತರದ ದಿನಗಳಲ್ಲಿ ಆ ಕಾಡನ್ನು ಮಾನವನು ಕಡಿಯುತ್ತ ಬಂದು ಹಂತ-ಹಂತವಾಗಿ ಜನ ಸಮುದಾಯವು ವಾಸಿಸಲು ಆಶ್ರಯವನ್ನು ಕಟ್ಟಿಕೊಳ್ಳಲಾಯಿತು. ಹೊಸದಾಗಿ ಬಂದು ಜನಸಮುದಾಯವು ಇಲ್ಲಿ ನೆಲೆಸಿದ್ದರಿಂದ ಹೊಸಹಳ್ಳಿ ಎಂದು ಕರೆಯಲಾಯಿತು. ನಂತರದ ದಿನಗಳಲ್ಲಿ ಕಾನಾಹೊಸಹಳ್ಳಿ ಎಂದು ಕರೆಯಲಾಗಿದೆ.[೨]

**ಎರಡನೇ ಅಭಿಪ್ರಾಯ** : ಮೂಲತಹ ಬೇರೆ ಬೇರೆ ಹಳ್ಳಿಗಳಿಂದ ಬಂದು ಇಲ್ಲಿ ನೆಲೆಸಿದಂತಹ ಜನಸಮುದಾಯಗಳು ಅನೇಕ ಇವೆ. ಉದಾಹರಣೆ ಉಜ್ಜಿಯಿನಿ, ಕೋಡಿಹಳ್ಳಿ, ಉಜ್ಜಪ್ಪನಹಳ್ಳಿ, ಸಿದ್ಧಯ್ಯನಕೋಟೆ ಮುಂತಾದ ಗ್ರಾಮಗಳಿಂದ ಬಂದು ಬೇರೆ ಬೇರೆ ಜನಾಂಗದವರು ಇಲ್ಲಿ ನೆಲೆಸಿದರು. ಇದಕ್ಕೆ ಕಾರಣ ಇಲ್ಲಿರುವ ಪ್ರಕೃತಿಯ ಸಹಕಾರ, ಹಳ್ಳ-ಕೊಳ್ಳ, ಸುತ್ತಲೂ ಕೆರೆಗಳು, ಫಲವತ್ತದ ಭೂಮಿಯಿರುವುದರಿಂದ ಇವರುಗಳು ಇಲ್ಲಿ ನೆಲೆಸಲಿಕ್ಕೆ ಕಾರಣವಾಯಿತು. ಹೊಸದಾಗಿ ಬಂದು ಸೇರಿ ಇಲ್ಲಿ ನೆಲೆಸಿದ ಸಮೂಹಕ್ಕೆ ಹೊಸಹಳ್ಳಿ ಎಂದು ಕರೆಯಲಾಯಿತು. ಅಲ್ಲದೇ ಪಕ್ಕದ ಸಂಡೂರು ತಾಲ್ಲೂಕಿನಲ್ಲಿಯೂ ಸಹ ಒಂದು ಹೊಸಹಳ್ಳಿ ಎಂಬ ಗ್ರಾಮವಿದೆ. ಅದಕ್ಕೂ ಇದಕ್ಕೂ ಭಿನ್ನತೆ ಇರಲಿಯೆಂದು ಅಲ್ಲದೇ ಕಾನಾಮಡಗು ಹತ್ತಿರ ಇರುವುದರಿಂದ ಕಾನಾಹೊಸಹಳ್ಳಿ ಎಂದು ಜನಸಮೂಹವು ಇಂದಿಗೂ ಸಹ ಕಾನಾಹೊಸಹಳ್ಳಿ ಎಂದು ಪ್ರಚಲಿತದಲ್ಲಿರುವುದು ಕಂಡುಬರುತ್ತದೆ.[೩]

**ಮೂರನೇ ಅಭಿಪ್ರಾಯ** : ಚಿತ್ರದುರ್ಗ-ಸೊಲ್ಲಾಪುರಗಳನ್ನು ಜೋಡಿಸುವ ಹದಿಮೂರನೆಯ ರಾಷ್ಟ್ರೀಯ ಹೆದ್ದಾರಿಯಲ್ಲಿರುವ ಈ ಊರುಗಳು ಸಾಕಷ್ಟು ಪುರಾತನವಾಗಿವೆ. ಕಾನನ- ಕಾನಾ ಆಗಿದೆ. ಆಗ ಈ ಊರಿನ ಸುತ್ತ ದಟ್ಟವಾದ ಅಡವಿ ಇದ್ದಿರಬೇಕು ಈ ಪ್ರದೇಶದಲ್ಲಿ ಹೊಸದಾಗಿ ಜನ ಸಮುದಾಯವು ನೆಲೆಸಿದ್ದರಿಂದ ಕಾನಾಹೊಸಹಳ್ಳಿ ಎಂದು ಕರೆಯಲಾಯಿತು.[೪]

**ಐತಿಹ್ಯಗಳು**

ಒಂದು ನಿರ್ದಿಷ್ಟ ವೃತ್ತಿ, ಸ್ಥಳ, ಘಟನೆ, ವ್ಯಕ್ತಿ, ಸಂಸ್ಕೃತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಳ್ಳುವ ಕತೆಯೇ ಐತಿಹ್ಯ. ಇಲ್ಲಿ ಲಿಖಿತ ದಾಖಲೆಗಳೇನು ಇರುವುದಿಲ್ಲ. ನಿರೂಪಣೆಯೇ ಪ್ರಧಾನವಾಗಿರುತ್ತದೆ. ಐತಿಹ್ಯಗಳಲ್ಲಿ ಇತಿಹಾಸ, ಪುರಾಣ, ದಂತಕತೆಗಳು, ನಂಬಿಕೆಗಳು, ಸಂಪ್ರದಾಯಗಳು ಮತ್ತು ಆಚರಣೆಗಳ ಪೂರಕ ಅಂಶಗಳನ್ನು ಒಳಗೊಂಡಿರುತ್ತವೆ. ಈಗಾಗಿ ಐತಿಹ್ಯ ಇತರ ವಿಷಯಗಳ ಸಂಬಂಧ ಮತ್ತು ಭಿನ್ನತೆಯನ್ನು ಪ್ರಸ್ತುತ ಅಧ್ಯಾದಲ್ಲಿ ಚರ್ಚಿಸಲಾಗಿದೆ.

**ಮಾರಮ್ಮನ ಐತಿಹ್ಯ**

ಆಂಧ್ರ ಪ್ರದೇಶದ ಅಧವನಿ ಮಾರಮ್ಮನ ಮೂಲ ಸ್ಥಳ. ಮಾರಮ್ಮ ಬಹಳ ಸುಂದರವಂತಳು ಮತ್ತು ಅವಳು ಎಂದೂ ಮನೆಯಿಂದ ಹೊರಗೆ ಬಂದಿರಲ್ಲಿಲ್ಲ. ಒಂದು ದಿನ ಆಕಳು ಕರು ಮನೆಯಿಂದ ಹಗ್ಗ ಕಿತ್ತು ಹೊರಗೆ ನೆಗೆಯುತ್ತ ಓಡಿತು. ಅದನ್ನು ಹಿಡಿದು ತರಲು ಮಾರಮ್ಮ ಹಿಂಬಾಲಿಸಿದಳು. ಹೈಕಳ ಜನರ ಮನಸ್ಸು ಮಾರಮ್ಮನ ಮೇಲೆ ಬಿತ್ತು. ಅವಳ ಸುಂದರ ಮೈಕಟ್ಟಿಗೆ ಮಾರುಹೋದರು. ಬಲತ್ಕಾರ ಕೂಡ ನಡೆಯಿತು. ಆಕೆಗೆ ಅಪಾರ ಅವಮಾನವಾಯಿತು ಅದನ್ನು ತಡೆಯಲಾಗಲ್ಲಿಲ್ಲ. ತಂದೆಯನ್ನು ಕರೆದುಕೊಂಡು ಬಂಡಿಯನ್ನು ಊಡಿಸಿಕೊಂಡು ಪಶ್ಚಿಮ ದಿಕ್ಕಿಗೆ ಬರುತ್ತ ಇದ್ದರು. ತಂದೆಯು ಬಂಡಿಯನ್ನು ನಿಲ್ಲಿಸಿ ಎಲ್ಲಿಯವರೆಗೆ ಪಯಣ? ಎಂದು ಕೇಳಿದನಂತೆ. ಆಗ ಅವಳು ನೋಡಪ್ಪ ಈ ಬಂಡಿಯ ಹಚ್ಚು ಮುರಿದು ಎಲ್ಲಿ ಬೀಳುತ್ತದೋ ಅಲ್ಲಿ ನಿಲ್ಲಿಸು.

ಅಲ್ಲಿಯವರೆಗೆ ಹೊಡೆ ಬಂಡಿಯನ್ನು ಎಂದಳು. ಆಯಿತಮ್ಮ ಎಂದು ತಂದೆಯು ಬಂಡಿಯನ್ನು ಹೊಡೆದುಕೊಂಡು ಈಗಿರುವ ಸ್ಥಳಕ್ಕೆ ಬರುತ್ತಿರುವಾಗ "ಹಚ್ಚು ಮುರಿದು ಬಿತ್ತಂತೆ" ಆಗ ಮಗಳನ್ನು ತಿರುಗಿ ನೋಡಿದನಂತೆ ಸುಂದರವಾದ ಮಗಳು ದೈತ್ಯ ರೂಪದ ಮಾರಿಯಂತೆ ಆರ್ಭಟಿಸಿದಳು ಆ ದೃಶ್ಯ ನೋಡಿದ ಕೂಡಲೇ ಕಿಟ್ಟನೇ ಕೀರಿ ತಂದೆ ಪ್ರಾಣ ಬಿಟ್ಟ, ಆತನ ಸಮಾಧಿಯನ್ನು ಇಂದು ಕಾನಾಹೊಸಹಳ್ಳಿಯ ಊರ ಬಾಗಿಲ ಮುಂದೆ ಇರುವುದನ್ನು ಕಾಣಬಹುದು. ತಂದೆಯ ಸಮಾಧಿಯ ಮುಂದೆ ಹೋಗಿ ನೆಲೆ ನಿಂತಳಂತೆ ಈಗೆ ಕಾನಾಹೊಸಹಳ್ಳಿ ಮಾರಮ್ಮನ ಬಗ್ಗೆ ಇರುವ ಐತಿಹ್ಯವಾಗಿದೆ.[೫]

**ಮತ್ತೊಂದು ಅಭಿಪ್ರಾಯ ಪ್ರಕಾರ** : ಆಂಧ್ರ ಪ್ರದೇಶದ ಸಾಮಂತರಾಜ ಇದ್ದ. ಈ ಮಾರಮ್ಮನ ಸೌಂದರ್ಯವನ್ನು ನೋಡಿ ನನಗೆ ಮದುವೆ ಮಾಡಿಕೊಡಿ ಎಂದು ಮಾರಮ್ಮನ ತಂದೆ ಕೆಂಚಪ್ಪ ಆಚಾರಿ ಇವರು ಬಡಗಿತನ ಕೆಲಸ ಮಾಡುತ್ತಿದ್ದರು. ಇವರ ಬಳಿ ಹೋಗಿ ಸಾಂಮತರಾಜ ನಿನ್ನ ಮಗಳನ್ನು ನನಗೆ ಕೊಡು ಎಂದು ಆತನ ಬಳಿ ಕೇಳಿದನು. ಆಗ ಆತನು ಇಲ್ಲ ಸ್ವಾಮಿ ನನ್ನ ಮಗಳನ್ನು ಒಂದು ಸಾರಿ ಕೇಳಬೇಕು ಎಂದು ಹೇಳಿದನು. ಆಗ ಮಗಳು ತಲೆ ಸ್ನಾನ ಮಾಡಿ ಕೂದಲು ಹಾರಿಸಿಕೊಳ್ಳುತ್ತಾ ಇರುವಾಗ ಮಗಳ ಎದುರಿಗೆ ತಂದೆಯನ್ನು ಕೇಳಿದ ಆಗ ಮಗಳು ಇಲ್ಲ ಎಂದು ಹೇಳಿದಳು. ನನಗೆ ಮದುವೆಯೇ ಬೇಡ ಎಂದು ಹೇಳಿದಳು. ಆಗ ತಂದೆ ಮಗಳಿಗೆ ಮದುವೆ ಮಾಡಿಲ್ಲವೆಂದರೆ ಸಮಾಜದಲ್ಲಿ ನನಗೆ ಕೆಟ್ಟ ಹೆಸರು ಬರುತ್ತದೆ ದಯಮಾಡಿ ಒಪ್ಪಿಕೊ ರಾಜಜ್ಞೆಯನ್ನು ಒಪ್ಪಿಕೊ ಎಂದು ಕೇಳಿದ. ಆದರೆ ಮಗಳು ಇಲ್ಲ ಅಪ್ಪಾ ಸಾಧ್ಯವಿಲ್ಲ ಬೇಕಿದ್ದರೆ ನಾನು ಊರು ಬಿಟ್ಟು ಹೋಗುತ್ತೇನೆ ಎಂದು ಹೇಳಿದಳು. ಆಗ ತಂದೆ ಇರು ನಾನು ಬಂದು ಬಿಡುತ್ತೇನೆ ನಿನ್ನ ಜೊತೆಯಲಿ ನಾನೊಬ್ಬನೇ ಇಲ್ಲಿದ್ದು ಏನು ಮಾಡಲಿ ಎಂದು ಕಬ್ಬಿಣದ ಗಾಡಿಯಲ್ಲಿ ಅಲ್ಲಿಂದ ಇಲ್ಲಿಯವರೆಗೆ (ಕಾನಾಹೊಸಹಳ್ಳಿ) ಬರುವಾಗ ತಂದೆ ಮಗಳನ್ನು ಎಲ್ಲಿಯವರೆಗೆ ಪಯಣವೆಂದು ಕೇಳಿದಾಗ ಅದಕ್ಕೆ ಮಗಳು ಎಲ್ಲಿ ಈ ಗಾಡಿಯ ಹಚ್ಚು ಮುರುದೂ ಬಿಳುತ್ತೊ ಅಲ್ಲಿ ನಿಲ್ಲಿಸು ಎಂದು ಹೇಳಿದಳು. ಕೋಟೆಯ ಹತ್ತಿರ ಮುರಿದು ಬಿತ್ತು ಅಲ್ಲಿ ಸ್ಥಳಿಯರಾಗಿರುವ ಬಡಗಿತನದವರು ಇವರಿಗೆ ಅನ್ನ ಆಹಾರ ನೀಡಿ ಈ ಮನೆಯಲ್ಲಿ ಇರಿಯೆಂದು ಹೇಳಿದರು. ಪ್ರಸ್ತುತ ಮಾರಮ್ಮ ದೇವಸ್ಥಾನದ ಮುಂದೆ ರೋಗ ಪೀಡಿತರಾಗಿ ತಂದೆ ತಿರಿಕೊಂಡರು. ಮುಂದೆ ಮಾರಮ್ಮ, ಮಸ್ತಮ್ಮ, ಮಲಿಯಮ್ಮಳಾಗಿ ಪವಾಡಗಳು ಹೆಚ್ಚಾಗಿ ಮಾರಮ್ಮ ದೇವಿಯಾಗಿ ಈ ಸ್ಥಳದಲ್ಲಿ ಪ್ರಸಿದ್ಧಿ ಪಡೆದುಕೊಂಡಳು.[೬]

## ಮಾರಮ್ಮನ ಮೂಗುತಿ ಪ್ರಸಂಗ

ಮಾರಮ್ಮನ ಜಾತ್ರೆಯಲ್ಲಿ ರಥೋತ್ಸವವನ್ನು ಮಾಡಲಾಗುತ್ತದೆ. ಈ ಸಂದರ್ಭದಲ್ಲಿ ಮಾರಮ್ಮ ದೇವಿಯು ರಥಕ್ಕೆ ಕೂರುವುದಕ್ಕಿಂತ ಮುಂಚೆ ಮೆರೆವಣಿಗೆ ಮಾಡಲಾಗುತ್ತದೆ. ಒಂದು ಬಾರಿ ಮೆರೆವಣಿಗೆ ಮಾಡುತ್ತಿರುವಾಗ ಮಾರಮ್ಮ ದೇವಿಯ ಮೂಗುತಿ ಕಳೆದುಹೋಗುತ್ತದೆ. ಆ ಸಂದರ್ಭದಲ್ಲಿ ಮಾರಮ್ಮ ದೇವಿ ಆ ಮೂಗುತಿ ಬಿದ್ದಿರುವ ಸ್ಥಳದಲ್ಲಿ ಬಂದು ಕೂತುಕೊಳ್ಳುವುದರ ಮುಖಾಂತರವಾಗಿ ಮೂಗುತಿ ಇರುವ ಕುರುಹನ್ನು ತೋರಿಸಿದ್ದಳಂತೆ. ಈ ಕಾರ್ಯವು ಅಲ್ಲಿ ನೆರೆದ್ದಿದ್ದ ಜನ ಸಮೂಹಕ್ಕೆ ಪವಾಡದ ರೀತಿ ನಡೆಯುತೆಂದು ಗ್ರಾಮದ ಹಿರಿಯರು ಹೇಳುವ ಮಾತಾಗಿದೇ.[೭]

## ವ್ಯಕ್ತಿ ಮತ್ತು ಸಮುದಾಯದ ಐತಿಹ್ಯಗಳು

ಬಳ್ಳಾರಿ ಜಿಲ್ಲೆಯ ಐತಿಹ್ಯಗಳನ್ನು ಸಂಗ್ರಹಿಸಿ ವ್ಯಕ್ತಿಯೊಬ್ಬನ ಹೆಸರಿನಲ್ಲಿ ನಡೆದ ಘಟನೆಯ ಹಿನ್ನೆಲೆಯಲ್ಲಿ ಹುಟ್ಟಿ ಬೆಳೆದ ಐತಿಹ್ಯಗಳನ್ನು ವ್ಯಕ್ತಿಐತಿಹ್ಯಗಳೆಂದು ಗುರುತಿಸಲಾಗಿದೆ. ವ್ಯಕ್ತಿ ಹಾಗೂ ಸಮಾಜ ಸಂಬಂಧಿಯಾಗಿರುವ ಸಮುದಾಯಗಳ ಬಗೆಗಿನ ಐತಿಹ್ಯಗಳನ್ನು ಇಲಿಕ್ರೂಢಿಕರಿಸಲಾಗಿದೆ. ಈ ಪ್ರಕಾರದ

ಐತಿಹ್ಯಗಳಲ್ಲಿ ಘಟನೆ ಮತ್ತು ಸ್ಥಳವನ್ನು ಕುರಿತಾದ ಐತಿಹ್ಯಗಳು ಕಂಡುಬಂದರು ಇಲ್ಲಿ ಮುಖ್ಯವಾಗಿ ವ್ಯಕ್ತಿಯನ್ನು ಪ್ರಧಾನವಾಗಿ ಹಿಟ್ಟುಕೊಂಡು ವ್ಯಕ್ತಿಗೆ ಸಂಬಂಧಿಸಿದ ಐತಿಹ್ಯಗಳನ್ನು ಈ ಕೆಳಗೆ ಕೊಡಲಾಗಿದೆ.

**೧. ಅಂಬಿಗ ಮತಸ್ಥ:**

ಅಂಬಿಗ ಮತಸ್ಥರ ನೆಲೆ ಬಗ್ಗೆ ಐತಿಹ್ಯ ಈಗಿದೆ "ಈ ಜಗತ್ತು ಮೊದಲು ನೀರೆ ನೀರಾಗಿತ್ತು. ಶಿವನ ಮಾತ್ರ ಒಂದು ದೋಣಿಯಲ್ಲಿ ನೀರಿನ ಮೇಲೆ ತಿರುಗಾಡುತ್ತಿದ್ದ. ಕ್ರಮೇಣ ನೀರು ತನ್ನ ಸುತ್ತಲೂ ಹೆಪ್ಪುಗಟ್ಟಿ ಭೂಮಿಯಾಗುತ್ತ ಹೊರಟಿತು. ನೀರಿನಲ್ಲಿ ಅನಂತ ಜೀವಿಗಳ ಉಗಮವು ಪ್ರಾರಂಭವು ಆಯಿತು. ಈ ಅನಂತ ಜೀವಿಗಳಲ್ಲಿ ಮನುಷ್ಯನ ಉಗಮವು ಆಯಿತು. ನೀರಿನಲ್ಲಿದ್ದ ಮಾನವರನ್ನು ಶಿವ ದೋಣಿಯಲ್ಲಿ ಹಾಕಿಕೊಂಡು ಹೆಪ್ಪುಗಟ್ಟಿದ ನೆಲದ ಮೇಲೆ ಬಿಡಲು ಪ್ರಾರಂಭಿಸಿದನು. ಶಿವನೊಂದಿಗೆ ಇನ್ನಷ್ಟು ಜನ ಅವನ ಕೆಲಸದಲ್ಲಿ ನೆರವಾದರು. ನೆಲದ ಮೇಲೆ ಉರುಳಿದ ಜನ ತಮಗೆ ಅನುಕೂಲವಾದ ಸ್ಥಳವನ್ನು ಹುಡುಕಿಕೊಂಡು ಜೀವಿಸತೊಡಗಿದರು. ಶಿವನೊಂದಿಗೆ ಕೆಲವು ಜನ ನೀರಿನ ದಡದಲ್ಲಿಯೇ ಉಳಿದುಕೊಂಡು ದೋಣಿ ನೆಡೆಸುವ ಕೆಲಸದೊಂದಿಗೆ ಜಲಚರಗಳನ್ನು ತಮ್ಮ ಆಹಾರವಾಗಿಸಿಕೊಂಡು ಬದುಕಲು ಪ್ರಾರಂಭಿಸಿದರು. ಈ ಜನಾಂಗವೇ ಮುಂದೆ ಅಂಬಿಗ ಮತಸ್ಥರೆಂದು ಪ್ರಸಿದ್ಧಿಗೆ ಬಂದರು".[೮] ಇಲ್ಲಿ ಯಾವುದೇ ಸಂದರ್ಭ ಮತ್ತು ಅವನ ವೃತ್ತಿಯಿಂದಾಗಿ ಬಂದು ಸಮುದಾಯ ಹುಟ್ಟಿಗೆ ಕಾರಣವಾಗಬಹುದಾಗಿದೆ ಎಂಬುದು ಇಂತಹ ಐತಿಹ್ಯಗಳ ಹಿಂದಿರುವ ಆಶಯವಾಗಿದೆ.

**೨. ಗಾಣಿಗರು**

ಗಾಣಿಗರು ಎಣ್ಣೆಯನ್ನು ತೆಗೆಯುವ ವೃತ್ತಿಯವರು. ಈ ಶಬ್ಧವು ಕನ್ನಡದ "ಗಾಣ" ಶಬ್ಧದಿಂದ ಉತ್ಪನ್ನವಾಗಿದ್ದು ಎಣ್ಣೆಯ ಗಾಣಿಗ ಎಂಬ ಅರ್ಥವನ್ನು ಕೊಡುತ್ತದೆ. ಇವರಲ್ಲಿ ಹಲವು ಉಪಜಾತಿಗಳಿವೆ ಅವುಗಳೆಂದರೆ ಸಜ್ಜನರು, ಜ್ಯೋತಿಪಣ, ಜ್ಯೋತಿನಗರ ಮೊದಲಾದವು ಇವರಲ್ಲಿ ಹೆಗ್ಗಾಣಿಗ ಮತ್ತು ಕಿರುಗಾಣಿಗರೆಂಬ ಎರಡು ಉಪಜಾತಿಗಳಿದ್ದು, ಹೆಗ್ಗಾಣಿಗರು ಗಾಣಕ್ಕೆ ಎರಡು ಎತ್ತುಗಳನ್ನು ಉಪಯೋಗಿಸಿದರೆ ಕಿರುಗಾಣಿಗರು ಕೇವಲ ಒಂದೇ ಎತ್ತನ್ನು ಗಾಣಕ್ಕೆ ಬಳಸುತ್ತಾರೆ. ಸಾಮಾನ್ಯವಾಗಿ "ಸೆಟ್ಟಿ" ಎಂಬ ಉಪನಾಮವನ್ನು ತಮ್ಮ ಹೆಸರಿನೊಂದಿಗೆ ಬಳಸುವರು. ಇವರು 'ಶಿವ' ಮತ್ತು 'ವಿಷ್ಣು' ಇಬ್ಬರನ್ನು ಪೂಜಿಸುವರು  ಇವರು ಮನೆಯಲ್ಲಿ ಕನ್ನಡ ಭಾಷೆ ಮಾತನಾಡುವರು. ಗಾಣಿಗರು ತಮ್ಮ ಉತ್ಪತ್ತಿಯನ್ನು ಭಗವಾನ್ ಈಶ್ವರನ ಬೇವರಿನಿಂದ ಜನಿಸಿದ ಆದಿಮಾನವನಿಂದಾಗಿದೆ. ಎಂದು ತಿಳಿಯುತ್ತಾರೆ.(ನಂಜುಂಡಯ್ಯ ಮತ್ತು ಐಯ್ಯರ್೧೯೩೦) ಮಾಹಿತಿಯನ್ನು ಒದಗಿಸುವವರ ಅಭಿಪ್ರಾಯಕ್ಕೂ ಮತ್ತು ಐಯ್ಯರ್ ರವರ ಅಭಿಪ್ರಾಯಕ್ಕೂ ಅಂತರವಿದ್ದು ಅವರು ತಮ್ಮ ಪುಸ್ತಕದ ಪರಿವಿಡಿಯಲ್ಲಿ ತಾತ್ವಿಕವಾಗಿ ಗಾಣಿಗರ ಉತ್ಪತ್ತಿಯನ್ನು ಚರ್ಚಿಸುತ್ತಾರೆ. ಆದರೆ ಇಲ್ಲಿ ಉತ್ಪತ್ತಿಗೆ ಇರುವ ಕಾರಣಗಳಲ್ಲಿ ಮಾತ್ರ ವ್ಯತ್ಯಾಸವಿದೆ.

**ದಂತಕಥೆಗಳ ಪ್ರಕಾರ**

ಭಗವಂತನಾದ ಶಿವ ಮತ್ತು ಅವನ ಪತ್ನಿಯಾದ ಪಾರ್ವತಿಯರು ಎಣ್ಣೆಯಲ್ಲಿ ಸ್ನಾನವನ್ನು ಮಾಡಬೇಕೆಂದು ಬಯಸಿ ಒಬ್ಬ ಗಾಣಿಗನನ್ನು ಎಣ್ಣೆಯನ್ನು ಒದಗಿಸುವಂತೆ ಕೇಳಲಾಗಿ, ಅವನು ಆ ಸಮಯದಲ್ಲಿ ಎಣ್ಣೆಯನ್ನು ಒದಗಿಸಲು ಅಸಮರ್ಥನಾದನು. ಇದರಿಂದ ಅವರು ಸಿಟ್ಟುಗೂಂಡರು. ಆತನು ಮರಳಿಬಂದಾಗ ಆತನು ತಂದ ಎಣ್ಣೆಯನ್ನು ಮೆಟ್ಟಿಲುಗಳಿಗೆ ಎಸೆಯಲು ಹೇಳಲಾಯಿತು. ಈಶ್ವರನು ತನ್ನ ಹಣೆಯಿಂದ ಬಂದಂತಹ ಬೆವರಿನ ಹನಿಯಿಂದ ಒಬ್ಬ ಮನುಷ್ಯನನ್ನು ಸೃಷ್ಠಿಸಿದನು. ಇವನನ್ನು

ಸ್ನಾನಮಾಡುವುದಕ್ಕಾಗಿ ಎಣ್ಣೆಯನ್ನು ಒದಗಿಸಲು ಕೇಳಿದಾಗ ಆತನು ಎಣ್ಣೆಯನ್ನು ಅರೆಯಲು ಎಣ್ಣೆಕಾಳುಗಳನ್ನು ಕೇಳಿದನು ಆಗ ಅವನಿಗೆ ನೀಡಿದಂತಹ ಎಣ್ಣೆಕಾಳುಗಳನ್ನು ತನ್ನ ಅಂಗೈ(ಎಡಗೈ) ಯಲ್ಲಿಟ್ಟು ತನ್ನ ಬಲಗೈ ಮೊಣಗಂಟಿನಿಂದ ತಿರುಗಿಸಿದಾಗ ಎಣ್ಣೆಯು ಅತಿಯಾಗಿ ಇಳಿದುಬಂದಿತು. ಈ ದೇವತ ಪುರುಷನು ಶಿವಜ್ಯೋತಿಪಣ ಎಂದು ಕರೆಯಲ್ಪಟ್ಟಿದ್ದಾನೆ. ಗಾಣಿಗರು ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಹರಡಿದ್ದಾರೆ, ಶಿವಜ್ಯೋತಿಪಣದವರು ಹೆಚ್ಚಾಗಿ ಮೈಸೂರು ಸಂಸ್ಥಾನದ ದಕ್ಷಿಣ ಭಾಗದಲ್ಲಿ ಕಂಡುಬಂದರೆ, ಸಜ್ಜನರು ಹೆಚ್ಚಾಗಿ ಕರ್ನಾಟಕದ ಉತ್ತರ ಭಾಗದಲ್ಲಿ ಕಂಡುಬರುತ್ತಾರೆ. ದಕ್ಷಿಣಕನ್ನಡ ಜಿಲ್ಲೆಯಲ್ಲಿ ತುಳು ಮಾತಾನಾಡುವ ಗಾಣಿಗರು ಕಂಡುಬರುತ್ತಾರೆ. ಇವರು ಕನ್ನಡ ಭಾಷೆ ಮತ್ತು ಅದರ ಲಿಪಿಯನ್ನು ಬಳಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯ ಗಾಣಿಗರು ತೆಂಗಿನಕಾಯಿ(ಕೊಬ್ಬರಿ)ಯಿಂದ ಎಣ್ಣೆಯನ್ನು ತೆಗೆಯುತ್ತಾರೆ.[೬]

ಕೂಡ್ಲಿಗಿ ತಾಲೂಕಿನಲ್ಲಿ ಗಾಣಿಗರು ಉಜ್ಜಿನಿ, ಕೊಟ್ಟೂರು, ಕೂಡ್ಲಗಿ, ಬಣವಿಕಲ್ಲು, ಹೂಡೇಂ, ಹೀರೇಹೆಗ್ಡಾಳು, ಕಾನಾಹೊಸಹಳ್ಳಿ, ಕಾನಾಮಡಗು ಈ ಗ್ರಾಮಗಳಲ್ಲಿ ಕಂಡುಬರುತ್ತಾರೆ. ಇವರು ನಾಯಕನಹಟ್ಟಿ ತಿಪ್ಪೇಸ್ವಾಮಿ, ಹುಲಿಗೆಮ್ಮ, ಉಜ್ಜನಿಮರುಳಸಿದ್ದೇಶ್ವರ, ಕೊಟ್ಟೂರಿನ ಕೊಟ್ಟೂರೇಶ್ವರ, ಆಂಜನೇಯ, ಬಸವೇಶ್ವರ, ಇತ್ಯಾದಿ ದೇವರುಗಳನ್ನು ಪೂಜಿಸುತ್ತಾರೆ. ಗ್ರಾಮದಲ್ಲಿ ಈ ಸಮುದಾಯದವರು ಹೆಚ್ಚಾಗಿ ವರ್ತಕರಾಗಿ ಜೀವನ ಸಾಗಿಸುತ್ತಿರುವುದು ಕಂಡುಬರುತ್ತದೆ. ಅಲ್ಲದೆ ಮದುವೆ ಹಾಗೂ ಇತರ ಶುಭ ಸಮಾರಂಭ ಗಳಿಗೆ ಗ್ರಾಮದ ರಾಷ್ಟ್ರೀಯ ಹೆದ್ದಾರಿ ಪಕ್ಕದಲ್ಲಿ ಗಾಣಿಗರ ಸಮುದಾಯ ಭವನವನ್ನು ಸಹ ನಿರ್ಮಿಸಿರುವುದು ಕಂಡು ಬರುತ್ತದೆ.

**ಈಡಿಗ**

ಈಡಿಗ ಸಮುದಾಯದ ಬಗೆಗೆ ಕತೆಯೊಂದು ಐತಿಹ್ಯದ ಸ್ವರೂಪವನ್ನು ಹಿಗೆ ಪಡೆದುಕೊಂಡಿದೆ. "ಬಹುಕಾಲದ ಹಿಂದೆ ಒಂದನೊಂದು ದಿನ ಪಾರ್ವತಿ ಪರಮೇಶ್ವರರು ವಿಹರಾರರ್ಥವಾಗಿ ಕಾಡಿಗೆ ಬರುತ್ತಾರೆ. ಪಾರ್ವತಿಗೆ ಬಯಾರಿಕೆ ಆಗುತ್ತದೆ. ಹತ್ತಿರದಲ್ಲಿದ್ದ ಈಚಲಮರವನ್ನು ನೋಡಿ ಈ ಮರದ ರಸದಿಂದ ದಾಹತಣಿಯಲು ಸಾಧ್ಯವೆಂದು ಯೋಚಿಸುತ್ತಾಳೆ, ಅದೇ ಮಾರ್ಗವಾಗಿ ಬಂದ ಬಳೆ ಮಾರುವ ಬಣಜಿಗನಿಗೆ ಈಚಲು ರಸ ತೆಗೆಯುವುದನ್ನು ಪಾರ್ವತಿ ಹೇಳಿಕೊಟ್ಟು ತೆಗೆಸುತ್ತಾಳೆ. ಅದನ್ನು ಸೇವಿಸಿ ಸಂತೃಪ್ತಿಗೊಂಡು ಉಂಗುರವೊಂದನ್ನು ಕೊಟ್ಟು ಅದರ ಗುಟ್ಟು ತಿಳಿಸಿ ಹೊರಡುತ್ತಾಳೆ. ಆ ಉಗುಂರದ ಸಹಾಯದಿಂದ ಈಚಲು ಮರವನ್ನು ಬಗ್ಗಿಸಿಕೊಳ್ಳು ತೆಗೆಯಲು ಸಾಧ್ಯವಿತ್ತು. ಕ್ರಮೇಣ ಆಚಾರ ತಪ್ಪಿದ್ದರಿಂದ ಆ ಉಂಗುರವನ್ನು ಅಳಿಲು ನುಂಗಿತು. ಆನಂತರ ಮರವನ್ನು ಹತ್ತಿಯೆ ರಸ ತೆಗೆಯಬೇಕಾಯಿತು" ಈ ವೃತ್ತಿಯನ್ನು ಅನುಸರಿಸಿ ಈಡಿಗರಾದರು ಎಂದು ಹೇಳುವ ಕಥನ ಒಂದು ಸಮುದಾಯದ ಹಿನ್ನೆಲೆಯನ್ನು ತಿಳಿಸುವುದಾಗಿದೆ.[೧೦]

**ಅಗಸ**

ಬೇರೆ ಬೇರೆ ಜಾತಿಗೆ ಸಂಬಂಧಪಟ್ಟಂತೆ ಹಲವಾರು ಐತಿಹ್ಯಗಳು ಪ್ರಚಲಿತದಲ್ಲಿವೆ. ಇಲ್ಲಿ ವ್ಯಕ್ತಿಗೆ ಸಂಬಂಧ ಪಟ್ಟಂತಹ ಐತಿಹ್ಯಗಳು ಒಂದು ಭಾಗದ ಅಧ್ಯಯನವಾದರೆ ಆ ಜನಾಂಗದ (ಜಾತಿ) ಮೂಲವನ್ನು ಅಧ್ಯಯನ ಮಾಡುವುದು ಎರಡನೆಯದಾಗುತ್ತದೆ. ಈ ಹಿನ್ನೆಲೆಯಲ್ಲಿ ಸಮಾಜದಲ್ಲಿ ತಮ್ಮದೇ ಆದ ಪ್ರಭಾವವನ್ನು ಬೀರಿದ "ಅಗಸ" ಸಮುದಾಯದ ವೃತ್ತಿ ಮತ್ತು ಜಾತಿಯ ಮೂಲಕ್ಕೆ ಸಂಬಂಧ ಪಟ್ಟಂತಹ ಐತಿಹ್ಯಗಳು ನಮಗೆ ಜಿಲ್ಲೆಯಲ್ಲಿ ಲಭಿಸುತ್ತವೆ. ಸಮಾಜದಲ್ಲಿ ಸಮಾಜಕೋಸ್ಕರ ತಮ್ಮನ್ನು ತಾವು ತೊಡಗಿಸಿಕೊಂಡ ಈ ಜನಾಂಗವು ತೀರ ವಿಶಿಷ್ಟವಾಗಿದೆ.

ಇಲ್ಲಿ ಸೃಷ್ಟಿಗೆ ಮೂಲವಾದ ಐತಿಹ್ಯಗಳನ್ನು ಒಳಗೊಂಡ ಅಂಶ ಈ ಜನಾಂಗದ ಐತಿಹ್ಯದಿಂದ ತಿಳಿದು ಬರುತ್ತದೆ. ಹಿಂದೊಮ್ಮೆ ಗಂಗೆಯು ಋತುಮತಿಯಾದಳು ಸ್ನಾನ ಮಾಡಿ ನೀರಿನಲ್ಲಿ ತನ್ನ ಮೈಲಿಗೆ ಬಟ್ಟೆಗಳನ್ನು ತೇಲಿ ಬಿಟ್ಟಳು. ಭೂತಾಯಿ ಅದನ್ನು ತನ್ನಲ್ಲಿ ಉದುಗಿಟ್ಟುಕೊಂಡು ಕಾಲ ಕಳೆದಂತೆ ಯುಗಗಳು ಬದಲಾದಂತೆ ಮತ್ತೊಮ್ಮೆ ಪಾಂಚಾಲಿ ಹೊರಗಾದಳು. ಈ ಪಾಂಚಾಲಿ ಸ್ನಾನ ಮಾಡಿ ಬರುವಾಗ ಹೊರಗಾದ ಬಟ್ಟೆಗಳನ್ನು ಗಿಡದ ಮೇಲೆ ಹಾಕಿ ಆದರೆ ಬೆತ್ತಲೆಯಿರಲು ನಾಚಿದ ಪಾಂಚಾಲಿ ಶಿವನ ಮೊರೆಹೊಕ್ಕಳು. ತನ್ನ ಬಟ್ಟೆಯನ್ನು ಯಾರಾದರೂ ಮಡಿ ಮಾಡಿಕೊಡಲಿ ಎಂದು ಕೇಳಿದಳು ಶಿವ ಅನುಕಂಪಗೊಂಡು ಮಂತ್ರಿಗೆ ಹೇಳಿದ. ನೀರು ಸಿಂಪಡಿಸಿದ ಕೆಲವು ಹನಿಗಳು ಚುಕ್ಕಿಗಳಾದವು ಕೆಲವು ಬಾಳೆಯ ಎಲೆಯ ಮೇಲೆ ಬಿದ್ದವು. ಅದರಿಂದ ಹುಟ್ಟಿದವನಿಗೆ ಬಟ್ಟೆ ಸೆಳೆಯುವ ಕೆಲಸವನ್ನು ಕೊಡಲಾಯಿತು ಅವನ ವಂಶಸ್ಥರೇ ಅಗಸರು.[೧೧] ಎಂದು ಒಂದು ಐತಿಹ್ಯದ ಪ್ರಕಾರ ಹೇಳಬಹುದು.

## ಮಾದಿಗ–ಹೊಲೆಯ (ಎಡಗೈ–ಬಲಗೈ)

ಎಡಗೈ ಮತ್ತು ಬಲಗೈ ಹುಟ್ಟಿನ ಹಿಂದೆ ಒಂದು ಅದ್ಭುತ ಜನಪದ ಕತೆಯೊಂದು ಹೀಗಿದೆ. ಕೈಲಾಸದಲ್ಲಿ ಪಾರ್ವತಿ ಮುಟ್ಟಾದ ಸೀರೆಯನ್ನು ಮೂಲೆಯಲ್ಲಿ ಬೀಸಾಕಿದ್ದಳಂತೆ. ಅದರಲ್ಲಿ ಹುಟ್ಟಿದವನೇ 'ಹೊಲೆಯ'ನಾದ. ಕಾಮಧೇನು ಕಾಯುವುದು ಇವನ ಕಾಯಕ. ಒಮ್ಮೆ ತಾಯಿ ಕಾಯಿಸಿಟ್ಟ ಹಾಲನ್ನು ಕುಡಿಯುತ್ತಾನೆ. ಈ ಹಾಲೇ ಇಷ್ಟು ಚೆನ್ನಾಗಿರುವಾಗ ಅದರ ಮಾಂಸ ಹೇಗಿದ್ದಿತು ಎಂದು ಯೋಚಿಸಿದ. ಒಂದು ದಿನ ಕಾಮಧೇನುವನ್ನು ಕಲ್ಲಲ್ಲಿ ಹೊಡೆದು ಸಾಯಿಸಿದ ಹೆದರಿದ ಈ ಹುಡುಗ ಶಿವನ ಬಳಿ ಬಂದು ವಿಚಾರ ತಿಳಿಸಿದ. ಆಗ ಮಾಂಸವನ್ನು ತಿನ್ನುವುದಕ್ಕೆ ಅಪ್ಪಣೆ ಕೊಡುತ್ತಾನೆ. ಆದರೆ ನನ್ನ ಒಬ್ಬನಿಂದ ಇದು ಆಗಲ್ಲ ಸಹಾಯಕ್ಕೆ ಏನಾದರೂ ಮಾಡಿ ಅಂದಾಗ ಆಗ ಶಿವನ ಮದದ ಬೆವರಿನಿಂದ ಮಾಯದ ಹುಡುಗ ಬಂದು ನಿಂತನಂತೆ ಅವನು ಕತ್ತಿ, ಕಠಾರಿಯನ್ನು ಹಿಡುಕೊಂಡು ನಿಂತಿದ್ದನ್ನು ನೋಡಿ ಹೊಲೆಯರ ಹುಡುಗ ಹೆದರಿ ಓಡುತ್ತಾನೆ. ಆಗ ಶಿವ ಅವನನ್ನು ಬಲಗೈಯಲ್ಲಿ ಹಿಡಿದುಕೊಂಡನಂತೆ ಅವತ್ತಿನಿಂದ ಬಲಗೈ–ಎಡಗೈ ಬಣಗಳಾದವು. ಎಡಗೈನವ ಹನ್ನೆರಡು ಆಯುಧವನ್ನು ತೊಟ್ಟುಕೊಂಡು ನಿಲ್ಲುತ್ತಾನೆ, ಆಗ ಶಿವ ಅವರಿಬ್ಬರನ್ನು ಕುರಿತು 'ಭೂಲೋಕಕ್ಕೆ ಹೋಗಿ ಅಣ್ಣ ತಮ್ಮಂದಿರಾಗಿ ಬಾಳು ಮಾಡಿರಿ ಎಂದು ಹೇಳಿದ'. ಇಲ್ಲಿ ಒಂದು ಪಂಗಡವನ್ನು ಶ್ರೇಷ್ಠ ಎಂದು ಹೇಳಿ ಮತ್ತೊಂದು ಅದಕ್ಕಿಂತ ಹೀನವಾದುದು ಎಂದು ಹೇಳುವುದರ ಮೂಲಕ ಅವರಿಬ್ಬರಲ್ಲಿ ಮನಸ್ತಾಪ ಅಥವಾ ಜಗಳ ತಂದಿಡುವ ತಂತ್ರವಾಗಿದೆ. ಆದರೆ ಕೊನೆಯಲ್ಲಿ ಅಣ್ಣ ತಮ್ಮಂದಿರಾಗಿ ಬಾಳಿರಿ ಎಂದು ತಿಳಿಸುವಲ್ಲಿ ಅವರಿಬ್ಬರಿಗೂ ಮೂಲದಲ್ಲಿ ಒಂದೇ ಎಂಬುದು ಸ್ಪಷ್ಟವಾಗುತ್ತದೆ. ಈ ಎರಡು ಜಾತಿಯವರು ಈ ನೀತಿಯನ್ನು ಈಗಲೂ ಎಷ್ಟು ಬಲವಾಗಿ ನಂಬಿದ್ದಾರೆ ಮತ್ತು ಆಚರಣೆಯಲ್ಲಿ ಉಳಿಸಿಕೊಂಡಿದ್ದಾರೆ ಎಂಬುದಕ್ಕೆ ಒಂದು ನಿದರ್ಶನವಿದೆ.

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಒಂದು ಗ್ರಾಮದಲ್ಲಿ (ಭೀಮಸಮುದ್ರ) ಮಾದಿಗ ವ್ಯಕ್ತಿ ಆ ಊರಿನ ಆಂಜನೇಯನ ಜಾತ್ರೆ ಸಂದರ್ಭದಲ್ಲಿ ಪಟವೊಂದನ್ನು ಹರಾಜಿನಲ್ಲಿ ಕೊಳ್ಳುತ್ತಾನೆ ಹಾಗೇ ಕೊಂಡ ಪಟವನ್ನು ಗ್ರಾಮದ ಸಮಸ್ತ ಜನ ಸಮೂಹದಲ್ಲಿ ಆತನ ಮನೆಗೆ ಮೇಳಗಳೊಂದಿಗೆ ಮೆರವಣಿಗೆಯಲ್ಲಿ ಕೊಟ್ಟು ಬರುವುದು ಮೊದಲಿನಿಂದಲೂ ನಡೆದು ಬಂದ ಸಂಪ್ರದಾಯ. ಮೇಳ ಊದುವವರು ಛಲವಾದಿಗಳು (ಹೊಲೆಯರು) ಅವರು ಮೇಳ ಊದಿಕೊಂಡು ಹಟ್ಟಿಯವರೆಗೆ ಬಂದರು ಆದರೆ ಹಟ್ಟಿಯೊಳಗೆ ಬರಲು ನಿರಾಕರಿಸಿದರು. ಕಾರಣ ಕೇಳಿದಕ್ಕೆ "ಮೊದಲಿನಿಂದಲೂ ನಾವು ನಿಮ್ಮ ಹಟ್ಟಿಯೊಳಗೆ ಬಂದಿಲ್ಲ ಅದಕ್ಕೆ ಈಗಲೂ ಬರುವುದಿಲ್ಲ" ಎಂದು ಹೇಳಿದರು. ಆದರೆ ಹಣ ಕೊಟ್ಟ ವ್ಯಕ್ತಿ ಸುಮ್ಮನೇ ಕೂರಲ್ಲಿಲ್ಲ ಊರಿನ ಮುಖಂಡರಿಗೆ ಪಿರ್ಯಾದೆ ಕೊಟ್ಟ,

## ಅಡಿ ಟಿಪ್ಪಣಿಗಳು

೧. ಕಾಂತರಾಜ, ಐಮಂಗಲ ಹೊಬಳಿ ಪರಿಸರದ ಸಾಂಸ್ಕೃತಿಕ ಅಧ್ಯಯನ, ಪುಟ–೦೩
೨. ಕ್ಷೇತ್ರಕಾರ್ಯದ ಮಾಹಿತಿ
೩. ಜಗನ್ನಾಥ, ನಿವೃತ್ತ ಶಿಕ್ಷಕರು, ಕಾನಾಹೊಸಹಳ್ಳಿ ಗ್ರಾಮ
೪. ಗುರುಮೂರ್ತಿ ಪೆಂಡಕೂರು, ಬಳ್ಳಾರಿಯ ಜಿಲ್ಲೆಯ ಸ್ಥಳನಾಮಗಳು, ಪುಟ–೨೮
೫. ಕರಿಬಸಪ್ಪ ಎ, ಬಳ್ಳಾರಿ ಜಿಲ್ಲೆಯ ಐತಿಹ್ಯಗಳು, ಪಿಎಚ್.ಡಿ ಮಹಾಪ್ರಬಂಧ, ಪುಟ–೧೬೭೧೬೮
೬. ಜಗನ್ನಾಥ, ನಿವೃತ್ತ ಶಿಕ್ಷಕರು, ಕಾನಾಹೊಸಹಳ್ಳಿ ಗ್ರಾಮ
೭. ಅದೇ
೮. ಕರಿಬಸಪ್ಪ ಎ, ಪೂರ್ವೋಕ್ತ, ಪುಟ–೧೨೫
೯. ಹಂದ್ರಾಳ ಮಾರ್ಕಂಡೇಯ, ಬಳ್ಳಾರಿ ಜಿಲ್ಲಾ ಗಾಣಿಗರು ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ ಪುಟ–೦೬
೧೦. ಕರಿಬಸಪ್ಪ ಎ, ಪೂರ್ವೋಕ್ತ, ಪುಟ–೧೨೪
೧೧. ಕರಿಬಸಪ್ಪ ಎ, ಪೂರ್ವೋಕ್ತ ಪುಟ–೧೨೬
೧೨. ಮೈಲಹಳ್ಳಿ ರೇವಣ್ಣ, ಮಾತಂಗ ಬಳಗ, (ಜಾನಪದಿಯ ಅಧ್ಯಯನ) ಪುಟ–೩೯–೪೧

# ಅಧ್ಯಾಯ-ನಾಲ್ಕು
## ದೇವಾಲಯಗಳು

ಮಾನವನ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ದೇವಾಲಯಗಳ ನಿರ್ಮಾಣ ಮೂರ್ತಿ ಶಿಲ್ಪಗಳ ಪ್ರತಿಷ್ಠಾಪನ ನಿರಂತರವಾಗಿ ನೆಡೆದುಬಂದಿದೆ. ದೇವಾಲಯ ಎಂದರೆ ದೇವರಿಗಾಗಿ ನಿರ್ಮಿಸಿದ ಆಲಯವೇ ಆಗಿದೆ. ಮಾನವನು ಮನೆಯನ್ನು ನಿರ್ಮಿಸಿಕೊಂಡು ಹೇಗೆ ಜೀವನ ನಿರ್ವಹಿಸುವನು ಹಾಗೆಯೇ ದೇವರಿಗೂ ಆಲಯವನ್ನು ನಿರ್ಮಿಸಬೇಕು ಎನ್ನುವ ಉದ್ದೇಶದಿಂದ ದೇವಾಲಯವನ್ನು ನಿರ್ಮಿಸಲು ಪ್ರಾರಂಭಿಸಿದ್ದಾನೆ. ಮಾನವನು ದೈವ, ವಾಸ್ತವಿಕ ಆದರ್ಶ ಇವುಗಳ ಮಿಲನದ ಸಂಕೇತವೇ ದೇವಾಲಯ. ಜಗತ್ತಿನ ಸೃಷ್ಟಿಕರ್ತ ಹಾಗೂ ನಿಯಂತ್ರಕನಾದ ದೇವನ ಬಳಿಗೆ ಹೋಗಲು ಸರಿಯಾದ ಮಾರ್ಗವನ್ನು ತೋರಿಸುವಂತೆ ಅವನನ್ನು ಪ್ರಾರ್ಥಿಸುವ ಸ್ಥಳವು ದೇವಾಲಯವೇ ಆಗಿದೆ. ಗತಕಾಲದ ಮಾನವನ ವಿವಿಧ ಕಾರ್ಯ ಚಟುವಟಿಕೆಗಳಲ್ಲಿ ದೇವಾಲಯಗಳ ಕಲ್ಪನೆ ಮತ್ತು ಆಚರಣೆಗಳ ಹಿನ್ನೆಲೆಯಲ್ಲಿ ವಾಸ್ತು, ಮೂರ್ತಿ ಶಿಲ್ಪಗಳ ನಿರ್ಮಾಣ ಆರಂಭವಾಯಿತು. ಈ ದೇವಾಲಯಗಳ ಸಮಾಜದಲ್ಲಿ ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಗಾಢವಾದ ಪರಿಣಾಮ ಬೀರಿವೆ. ಪ್ರಾಚೀನ ಕಾಲದಿಂದಲೂ ದೇವಾಲಯ, ಮಠ, ಶಿಕ್ಷಣ ಸಂಸ್ಥೆ ಹಾಗೂ ನ್ಯಾಯಲಯವು ಆಗಿ ಕಾರ್ಯ ನಿರ್ವಹಿಸುತಿತ್ತು. ವಾಸ್ತುಶಿಲ್ಪ ನಿರ್ಮಾಣದಲ್ಲಿ ಸಂಸ್ಕೃತಿಯ ಆಧ್ಯಾತ್ಮಿಕತೆ ಚಿಂತನೆ ಅಥವಾ ಧಾರ್ಮಿಕ ಮೂಲಕಲ್ಪನೆಗೆ ಅಧಿಕ ಪ್ರಾಮುಖ್ಯತೆ ಇದ್ದಿತು. ಅದಕ್ಕೆ ವಿರುದ್ಧವಾದ ಕಾಮ ಕರ್ಮಚಾರಣೆ ಮತ್ತು ಲೌಕಿಕ ಸುಖಗಳನ್ನು ಅಳವಡಿಸಿಕೊಳ್ಳಲಾಗಿದೆ. ವಾಸ್ತುಶಿಲ್ಪವು ಸಂಸ್ಕೃತಿಯ ಉಗಮ, ವಿಕಾಸಗಳಿಗೆ ಮೂಲ ಸ್ಥಾನವಾಗಿದೆ.

ಕ್ರಿ.ಪೂ.೩ನೇ ಶತಮಾನದಲ್ಲೇ ಭಾರತದಲ್ಲಿ ಬೌದ್ಧ ಸ್ತೂಪ ನಿರ್ಮಾಣವಾಗಿರುವುದನ್ನು ಕಾಣಬಹುದು. ಕ್ರಿ.ಶ. ೭-೮ನೇ ಶತಮಾನದ ಹೊತ್ತಿಗೆ ದೇವಾಲಯಗಳ ರಚನಾ ಕ್ರಮದಲ್ಲಿ ಸ್ಪಷ್ಟತೆ ಮೂಡಲಾರಂಭಿಸಿ, ದೇವಾಲಯಗಳನ್ನು ಇಟ್ಟಿಗೆ ಮತ್ತು ಕಲ್ಲಿನಲ್ಲಿ ಕಟ್ಟಿದರು. ಇದರಲ್ಲಿ ಕಲ್ಲಿನ ದೇವಾಲಯ ಶ್ರೇಷ್ಠವೆಂಬ ನಂಬಿಕೆಯಿದೆ. ಸಮಯದ ಪ್ರತೀಕ ಎನಿಸಿದ ದೇವಾಲಯವನ್ನು ನಿಯಮ ಬದ್ದವಾಗಿ ಕಟ್ಟಬೇಕೆಂಬ ಅರಿವು ಮೂಡಿದಾಗ ಅದಕ್ಕೆ ವಿಧಿ-ನಿಷೇಧಗಳನ್ನು ಹೇಳುವ ಶಾಸ್ತ್ರವೇ ಸಿದ್ಧವಾಯಿತು. ಇದೇ ವಾಸ್ತುವಿದ್ಯೆ, 'ವಾಸ್ತುಶಿಲ್ಪ ಶಾಸ್ತ್ರ' ಇದು ಅರವತ್ನಾಲ್ಕು ಕಲೆಗಳಲ್ಲಿ ಒಂದಾಗಿದೆ. ವಾಸ್ತು (ನಿವೇಶನ) ವಿನ ಮೇಲೆ ರಚಿಸಲಾದ ರಚನೆಗಳು ವಾಸ್ತು ರಚನೆ ಎನಿಸುತ್ತವೆ. ಹೀಗೇ ಮನೆ, ಕೋಟೆ, ಕೆರೆ, ಸೇತುವೆ, ದೇವಾಲಯ ಮುಂತಾದ ಎಲ್ಲಾ ರಚನೆಯನ್ನು ವಾಸ್ತುಶಿಲ್ಪ ಒಳಗೊಳ್ಳುವುದರಿಂದ ದೇವಾಲಯ ರಚನೆಯನ್ನು ದೇವಾಲಯದ ವಾಸ್ತುಶಿಲ್ಪ, ಧಾರ್ಮಿಕ ವಾಸ್ತುಶಿಲ್ಪ ಎಂದು ಗುರುತಿಸುವರು. ಶಿಲ್ಪ ಗ್ರಂಥಗಳಲ್ಲಿ ದೇವಾಲಯವನ್ನು ಪ್ರಸಾದ, ವಿಮಾನ, ಭವನ, ಹರ್ಮ್ಯ, ಸೌಧ, ನಿಕೇತನ, ಆಯಾತನ, ವೇಶ್ಮ, ಆಲಯ, ಮಂದಿರ ಇತ್ಯಾದಿಯಾಗಿ ಕರೆಯಲಾಗಿದೆ. ಆದರೂ ಹೆಚ್ಚಾಗಿ ವಿಮಾನ, ಪ್ರಸಾದ ಪದ ಬಳಕೆ ಮಾಡಲಾಗುತ್ತದೆ. ಭಾರತದಲ್ಲಿ ಕ್ರಿ.ಪೂ. ೩ನೇ ಶತಮಾನದಲ್ಲಿ ಸ್ತೂಪ ನಿರ್ಮಾಣ ತಿಳಿದ ಮೇಲೆ ತದನಂತರ ಬಂದ ಗುಪ್ತ ಕದಂಬರ ಕಾಲದ ದೇವಾಲಯ ಶೋಧನೆಯಲ್ಲಿ ಕಂಡುಬಂದಿವೆ.[೧] ಕರ್ನಾಟಕದಲ್ಲಿ ದೇವಾಲಯ ವಾಸ್ತುಶಿಲ್ಪ ಶಾತವಾಹನರ ಕಾಲದ ಬೌದ್ಧ ಧರ್ಮದ ಚೈತ್ಯ ಸ್ತೂಪ ವಿಹಾರ ಕಂಡು ಬರುತ್ತವೆ. ತಾಳಗುಂದದ ಮಹಾದೇವರ ದೇವಾಲಯ ಪೂಜೆಗೆ ಒಳಗಾಗಿತ್ತು ಎಂದು ಶಾಸನ ಹೇಳುತ್ತವೆ. ಸ್ಪಷ್ಟ ಮಾಹಿತಿ ಲಭ್ಯವಾಗಿಲ್ಲ.

ಬಳ್ಳಾರಿ ಜಿಲ್ಲೆಯ ದೇವಾಲಯಗಳ ನಿರ್ಮಾಣದ ಬಗ್ಗೆ ಅರಿಯುವುದಾದರೆ ಇಲ್ಲಿಯ ಅತೀ ಪ್ರಾಚೀನಕಾಲದ ದೇವಾಲಯಗಳೆಂದರೆ ರಾಷ್ಟ್ರಕೂಟರ ಕಾಲದವು ನಂತರ ನಿರ್ಮಾಣಗೊಂಡಿವೆ. ಇವರು ಹೆಚ್ಚಾಗಿ ಕಲ್ಯಾಣ ಚಾಲುಕ್ಯರು ಮರಳುಗಲ್ಲಿನ ಬದಲಾಗಿ ಕಪ್ಪು ಮಿಶ್ರಿತ ನೀಲಿಛಾಯೆಯ ಬಸಾಲ್ಟ್ ಶಿಲೆಯನ್ನು ಉಪಯೋಗಿಸುತ್ತಿದ್ದರು. ಕೂಡ್ಲಿಗಿ ತಾಲ್ಲೂಕು ಕಾನಾಹೊಸಹಳ್ಳಿ ಪರಿಸರ ಇದಕ್ಕೆ ಹೊರತಾಗಿಲ್ಲ ಅದರಲ್ಲಿ ಕಾನಾಹೊಸಹಳ್ಳಿ ಪರಿಸರದಲ್ಲಿ ತಕ್ಕ ಮಟ್ಟಿನ ಏಕಕೂಟ ಮತ್ತು ದ್ವಿಕೂಟ ದೇವಾಲಯಗಳಿವೆ. ಅದರಲ್ಲಿ ಕೆಲವು ಕಲ್ಯಾಣ ಚಾಲುಕ್ಯರ ಕಾಲದ ಶಿಲ್ಪ ಕಲೆಯನ್ನು ಹೋಲುವ ದೇವಾಲಯಗಳು ಕಾಣಸಿಗುತ್ತವೆ. ಇವು ಸ್ಥಳಿಯವಾಗಿ ಸಿಗುವ ಗ್ರಾನೈಟ್ (ಬೆಣಚು) ಕಲ್ಲಿನಲ್ಲಿಯೇ ನಿರ್ಮಾಣಗೊಂಡಿರುವುದು ವಿಶೇಷ.

## ದೇವಾಲಯಗಳ ರಚನೆ

ದೇವಾಲಯಗಳ ರಚನೆಯಲ್ಲಿ ಎರಡು ಸೂತ್ರಗಳನ್ನು ಅಳವಡಿಸಲಾಗಿದೆ. ಅವುಗಳೇ 'ಮಾನಸೂತ್ರ' ಮತ್ತು 'ವಿನ್ಯಾಸ ಸೂತ್ರ' ಇವು ಕ್ರಮವಾಗಿ ದೇವಾಲಯ ರಚನೆಯ ಲಂಬರೇಖೆ ಮತ್ತು ಅಕ್ಷ ರೇಖೆಗಳಾಗಿದ್ದು ದೇವಾಲಯದ ಅಳತೆ ಪ್ರಮಾಣವನ್ನು ಅದರ ಹೊರಚಾಚುವಿಕೆಯನ್ನು ಸೂಚಿಸುತ್ತದೆ. ಇದರಿಂದ ದೇವಾಲಯದ ರಚನಾ ಕ್ರಮವನ್ನು ಎರಡು ರೀತಿಯಲ್ಲಿ ಗುರುತಿಸಬಹುದು. ಉರ್ಧ್ವ ಮುಖ ಕ್ರಮ ಮತ್ತು ತಿರ್‍ಯಜ್ಮಖಕ್ರಮ. ದೇವಾಲಯದ ಕೆಳಗಿನಿಂದ ಮೇಲಕ್ಕೆ ಒಂದಾದ ಮೇಲೊಂದು ಭಾಗವನ್ನು ನಿಶ್ಚಿತರೀತಿಯಲ್ಲಿ ರಚಿಸುವ ಕ್ರಮವನ್ನು ಉರ್ಧ್ವಮುಖ ಕ್ರಮ ಎಂದು, ಅದೇ ರೀತಿ ಒಳಭಾಗದಲ್ಲಿ ಗರ್ಭಗೃಹ ಆದಿಯಾಗಿ ಅದರ ಮುಂದೆ ಇರುವ ಮಂಟಪ ಇತ್ಯಾದಿಗಳ ರಚನಾಕ್ರಮವನ್ನು ತಿರ್‍ಯಜ್ಮಖಕ್ರಮ ಎಂದು ಹೇಳಬಹುದು.[೨] ಕೂಡ್ಲಿಗಿ ತಾಲ್ಲೂಕು ಒಳಗೊಂಡಂತೆ ಕಾನಾಹೊಸಹಳ್ಳಿ ಪರಿಸರದಲ್ಲಿ ಉರ್ಧ್ವಮುಖ ಕ್ರಮ ರಚನೆಯ ದೇವಾಲಯ ಎಲ್ಲೂ ಕಂಡು ಬರುವುದಿಲ್ಲ. ಕೆಲವು ದೇವಾಲಯದಲ್ಲಿ 'ದ್ರಾವಿಡ' ಮಾದರಿಯ ಉರ್ಧ್ವಮುಖ ಕ್ರಮವನ್ನೇ ಅನುಸರಿಸಲಾಗಿದೆ. ಕೆಲವು ಪಾಳೆಗಾರರ ಮಾದರಿ ಹೋಲುತ್ತವೆ. ಆದರೆ ಕಾನಾಹೊಸಹಳ್ಳಿ ಪರಿಸರದಲ್ಲಿ ತಿರ್‍ಯಜ್ಮಖಕ್ರಮ ರಚನೆಯ ದೇವಾಲಯ ನಿರ್ಮಾಣ ಎಲ್ಲಾ ದೇವಾಲಯದಲ್ಲಿ ವಾಸ್ತುವಿಗೆ ರಚನೆಗೆ ಅನುಗುಣವಾಗಿ ನಿರ್ಮಿಸಲಾಗಿದೆ.

## ದೇವಾಲಯದ ಉರ್ಧ್ವಮುಖಕ್ರಮ

ಉರ್ಧ್ವಮುಖ ಕ್ರಮದಲ್ಲಿ (ಕೆಳಗಿನಿಂದ ಮೇಲಕ್ಕೆ) ಪ್ರಧಾನವಾಗಿ ಆರು ಭಾಗ (ಷಡ್ವರ್ಗ) ಗಳಿಂದ ಕೂಡಿರುತ್ತದೆ. ಅವುಗಳು ಅಧಿಷ್ಠಾನ, ಭಿತ್ತಿ, ಪ್ರಸ್ತಾರ, ಗ್ರೀವ, ಶಿಖರ, ಸ್ತೂಪಿಗಳಿಂದ ನಿರ್ಮಾಣಗೊಂಡಿರುತ್ತವೆ. ಇಂತಹ ಅಂಶಗಳುಳ್ಳ ದೇವಾಲಯದ ರಚನೆ ಎಲ್ಲಿಯೂ ಕಾಣಿಸಿಗದು. ಆದರೆ ಅಧಿಷ್ಠಾನ ಸರಳವಾಗಿದ್ದು ಭಿತ್ತಿಯಲ್ಲಿ ಶೈವ ಮತ್ತು ವೈಷ್ಣವ ಶಿಲ್ಪಗಳು, ನಾಗಬಂಧ, ಪ್ರಾಣಿಶಿಲ್ಪಗಳು ಹಾಗೇ ಮಿಥುನ ಶಿಲ್ಪಗಳೇ ಹೆಚ್ಚಾಗಿ ಕಂಡುಬರುತ್ತವೆ. ಪ್ರಸ್ತುತ ವಿಷಯದಲ್ಲಿ ಅಲ್ಲಲ್ಲಿ ಕಪೋತಮಾದರಿಯ ನಿರ್ಮಾಣ ಕಂಡು ಬರುತ್ತವೆ. ಮತ್ತೆ ಕೆಲವು ಸರಳ ಮಾದರಿಯ ರಚನೆಗಳೇ ಹೆಚ್ಚು, ಆದರೆ ಗ್ರೀವ, ಶಿಖರ, ಸ್ತೂಪಿ, ದ್ರಾವಿಡ ಮತ್ತು ಪಾಳೆಗಾರರ ವಿಜಯನಗರ ಶೈಲಿ ಹೋಲುತ್ತವೆ.[೩]

## ಅಧಿಷ್ಠಾನ

ಇದರಲ್ಲಿ ಉಪಾನ, ಜಗತಿ, ಖುರ, ಕುಂಭ, ಕುಮದ, ಪದ್ಮ, ಗಳ, ಕಂಪ, ಕಪೋತ, ಪಟ್ಟಿಕಾ, ಪ್ರತಿಬಂಧ, ಪಾದಬಂಧ,ಇವು ಅಧಿಷ್ಠಾನದ ಮುಖ್ಯಪ್ರಭೇದಗಳು. ಇತರಹದ ನಿರ್ಮಾಣ ದೇವಾಲಾಪುರದ ವಸಂತ ಮಲ್ಲಿಕಾರ್ಜುನ ದೇವಸ್ಥಾನದ ಪ್ರವೇಶ ದ್ವಾರದಲ್ಲಿ ಮಾತ್ರ ಕಾಣಸಿಗುತ್ತದೆ ಮತ್ತೆಲ್ಲೂ ಕಂಡುಬರುವುದಿಲ್ಲ.

## ಭಿತ್ತಿ

ಅಧಿಷ್ಠಾನದ ಮೇಲಿನ ಭಾಗವೇ ಭಿತ್ತಿ. (ಗೋಡೆ) ಇಲ್ಲಿ ನಿಶ್ಚಿತ ಅಂತರದಲ್ಲಿ ಕುಡ್ಯ ಸ್ತಂಬಗಳು ಇದ್ದು. ಅವುಗಳ ನಡುವೆ ಕೋಷ್ಠಜಾಲಕ (ವಾತಾಯನ), ತೋರಣ, ಕುಂಭಲತ ಇತ್ಯಾದಿಗಳಿರುತ್ತವೆ. ಕಾನಾಹೊಸಹಳ್ಳಿಯ ಪರಿಸರದಲ್ಲಿ ಕೆಲ ದೇವಸ್ಥಾನಗಳನ್ನು ನೋಡಬಹುದು.

## ಪ್ರಸ್ತರ

ಪ್ರಸ್ತರ ಭಿತ್ತಿಯ ಸ್ತಂಬದಿಂದ ಆರಂಭವಾಗಿದ್ದು ಉತ್ತರ, ವಾಜನ, ವಲ್ಲಭಿ, ಕಪೋತ, ಆಲಿಂಗ, ಆಂತರಿಕ, ಪ್ರತಿವಾಜಕ ಅಂಶಗಳನ್ನು ಹೊಂದಿರುತ್ತದೆ. ಇಂತಹ ಅಂಶಗಳುಳ್ಳ ದೇವಾಲಯಗಳು ವಿರಳ ಈಪರಿಸರದ ಭಾಗದಲ್ಲಿ ಪ್ರಸ್ತರದಲ್ಲಿ ಕೈಪಿಡಿಯನ್ನು ಹೊಂದಿದ ರಚನೆಯನ್ನು ಕಾಣಬಹುದು.

## ಗ್ರೀವ, ಶಿಖರ ಮತ್ತು ಸ್ತೂಪಿ

ಇವು ಪ್ರಸ್ತರದ ಮೇಲ್ಕಟ್ಟಡದ ಭಾಗಗಳು. ಇಲ್ಲಿ ಕ್ರಮವಾಗಿ ನಾಲ್ಕು, ಐದು, ಆರನೇ ಭಾಗಗಳಾದ ಇವು ದೇವತಾ ಶಿಲ್ಪ ಕೋಷ್ಠಕಗಳಿಂದ ಕೂಡಿರುತ್ತವೆ. ಶಿಖರವು ಬೇರೆ ಬೇರೆ ಆಕಾರದಲ್ಲಿ ವಿಷ್ಣುಛಂದ, ರುದ್ರಛಂದ, ಶಾಲಾಕಾರ, ಗಜವೃಷ್ಠಕಾರ ವಿವಿಧ ಹೆಸರುಗಳಿಂದ ಗುರುತಿಸುತ್ತೇವೆ. ಪ್ರಧಾನವಾಗಿ ನಾಸಿಯಿಂದ ಅಲಂಕರಣಗೊಂಡಿರುತ್ತವೆ. ಈ ರೀತಿಯ ಭಾಗಗಳನ್ನು ಹೊಂದಿದ ದೇವಾಲಯಗಳು ಈ ಭಾಗದಲ್ಲಿ ಕಾಣುವುದಿಲ್ಲ.

## ದೇವಾಲಯದ ತಿರ್ಯಙ್ಮುಖ ಕ್ರಮ

ದೇವಾಲಯದ ನಿರ್ಮಾಣ ಕ್ರಮದಲ್ಲಿ ತಿರ್ಯಙ್ಮುಖ ಕ್ರಮವು ಗರ್ಭಗೃಹದಿಂದ ಆರಂಭವಾಗಿ ಅಂತರಾಳ ಸುಖನಾಸಿ (ಅರ್ಧಮಂಟಪ) ನವರಂಗ, ಸಭಾಮಂಟಪ, ಮಹಾಮಂಟಪ, ಮುಖಮಂಟಪ, ಸೋಪಾನ ಹಂತಗಳಿಂದ ರೂಪಿತವಾಗಿ ಒಂದೊಂದು ಭಾಗವು ಒಂದೊಂದು ವಿಶೇಷತೆ ಯಿಂದ ಕೂಡಿರುತ್ತವೆ. ಈ ತರಹದ ದೇವಾಲಯ ನಿರ್ಮಾಣ ಕಾನಾಹೊಸಹಳ್ಳಿ ಪರಿಸರದಲ್ಲಿ ಅಷ್ಟಾಗಿ ನಿರ್ಮಾಣವಾಗಿಲ್ಲ ಕೆಲವೊಂದು ಹಂತಗಳನ್ನು ಒಳಗೊಂಡ ದೇವಾಲಯಗಳ ರಚನೆ ಮಾಡಲಾಗಿದೆ. ದೇವಾಲಯದಲ್ಲಿ ಕಕ್ಷಾಸನವು ಇರುವುದು ಕೆಲ ದೇವಾಲಯದಲ್ಲಿ ಕಂಡು ಬರುತ್ತದೆ. ಜೊತೆಗೆ ನಂದಿ ಮಂಟಪ, ಕಲ್ಯಾಣ ಮಂಟಪ, ರಂಗಮಂಟಪಗಳು ಇರುವುದುಂಟು. ಉದಾಹರಣೆಗೆ ಈ ಗ್ರಾಮದಲ್ಲಿ ಇರುವ ಕಲ್ಲೇಶ್ವರ ದೇವಾಲಯ ಈ ಗುಣಗಳನ್ನು ಮೈಗೂಡಿಸಿಕೊಂಡಿದೆ ಅಲಂಕೃತ ಪ್ರಸ್ತರ (ಒಳಚಾವಣಿ) ದ್ವಾರ ತೋರಣ ಮತ್ತು ಸೋಪಾನಗಳಿಂದ ಕೂಡಿದೆ. ದೇವಾಲಯದ ತಲವಿನ್ಯಾಸದ ಅತ್ಯಂತ ಪ್ರಮುಖ ಭಾಗವೆಂದರೆ 'ಗರ್ಭಗೃಹ' ದೇವಾಲಯ ಕೇಂದ್ರಬಿಂದು. ಉಳಿದ ಭಾಗಗಳು ಇದಕ್ಕೆ ಹೊಂದಿಕೊಂಡಂತೆ ನಿರ್ಮಾಣಗೊಂಡಿರುತ್ತವೆ ಸಾಮಾನ್ಯವಾಗಿ ಗರ್ಭಗೃಹ

ಚೌಕಕಾರವಾಗಿರುತ್ತವೆ. ಪ್ರಾಯಶಃ ಕಾನಾಹೊಸಹಳ್ಳಿ ಗ್ರಾಮದ ಎಲ್ಲಾ ದೇವಾಲಯಗಳು ಚೌಕಕಾರವಾಗಿರುವ ಗರ್ಭಗೃಹವನ್ನು ಕಾಣಬಹುದಾಗಿದೆ. ಕಾನಾಹೊಸಹಳ್ಳಿಯಲ್ಲಿ ಕೆಲವೇ ದೇವಾಲಯಗಳು ಅಂತರಾಳವನ್ನು ಹೊಂದಿವೆ ಎಂದು ಹೇಳಬಹುದು.[೪]

## ಕಂಬದ ರಚನೆ

ಯಾವುದೇ ಒಂದು ವಸ್ತು ಸ್ಥಿರವಾಗಿ ದೃಢವಾಗಿ ನಿಲ್ಲಬೇಕಾದರೆ ಅದಕ್ಕೊಂದು ಆಧಾರ ಬೇಕು, ಪ್ರಾಚೀನ ಕಾಲದ ಮನೆ ಮತ್ತು ದೇವಾಲಯಗಳನ್ನು ಗಮನಿಸಿದರೆ ಅವುಗಳ ಭದ್ರತೆಗೆ ಸ್ತಂಭಗಳೇಮುಖ್ಯ ಆಧಾರ. ಇದರಂತೆ ಸರ್ವಲೋಕಕ್ಕೆ ಆಧಾರನಾದ ಶಿವನನ್ನು ಮೂಲಸ್ತಂಭ ಎಂದು ಶಾಸನ ಉಲ್ಲೇಖಿಸುತ್ತದೆ. ಮಯಮತ, ಮಾನಸಾರ, ಕಾಮಿಕಾಗಮ, ಸುಪ್ರಭೇದಾಗಮ ಮುಂತಾದ ಶಾಸ್ತ್ರ ಗ್ರಂಥಗಳು ಸ್ತಂಭಗಳ ಬಗ್ಗೆ ಹೆಚ್ಚು ಮಾಹಿತಿಗಳನ್ನು ಒದಗಿಸುತ್ತವೆ. ಕಂಬದ ಮೊದಲ ಭಾಗವೇ 'ಪೀಠ' ಇದು ಚೌಕಕಾರವಾಗಿರಬೇಕು ಎಂದು ಮಾನಸಾರ ಗ್ರಂಥದಲ್ಲಿ ತಿಳಿಸಲಾಗಿದೆ. ಇದನ್ನು ಸಣ್ಣ ವೇದಿಕೆಯಂತೆ ರಚಿಸಿರಬೇಕು. ನಂತರ 'ದಂಡ' ಅನಂತರ ಮೇಲಿನದು 'ಗ್ರೀವ' ಭಾಗವಾಗಿ ಗುರುತಿಸಲಾಗುವುದು ಇದರಲ್ಲಿ ಬೋದಿಗೆಯೂ ಸಹ ಇರುತ್ತದೆ.[೫]

## ಪೀಠ

ಪೀಠ ಮೂಲದಲ್ಲಿದ್ದು ಅದರ ಮೇಲಿನ ಭಾಗವೇ ಪಾದ. ಇದು ಚೌಕಕಾರದ ಪಟ್ಟಿಕೆಯ ರೀತಿಯಲ್ಲಿ ಇರುತ್ತದೆ. ಸಿಂಹ, ವ್ಯಾಳಿ ಇತ್ಯಾದಿಗಳನ್ನು ಈ ಭಾಗದಲ್ಲಿ ಕೆತ್ತಲಾಗಿರುತ್ತದೆ. ಇಂತಹ ಸಿಂಹ, ವ್ಯಾಳಿ ಇರುವ ಕಂಬಗಳು ಕಾನಾಹೊಸಹಳ್ಳಿಯ ಮಾರಮ್ಮ ದೇವಾಲಯ ಮತ್ತು ಕಲ್ಲೇಶ್ವರ ದೇವಾಲಯಗಳಲ್ಲಿವೆ. ಇದರ ಮೇಲಿನ ಭಾಗವೇ 'ದಂಡ'. ಇದು ಕಂಬದಲ್ಲಿ ಬಹುಮುಖ್ಯ ಭಾಗವಾಗಿರುತ್ತೆ. ಅಂದರೆ ೮, ೧೬ ಪಟ್ಟಿಕೆಗಳಿಂದ ವಿನ್ಯಾಸವಾಗಿವೆ. ಕಂಬದ ರೂಪ ಮತ್ತು ವಿನ್ಯಾಸವನ್ನು ದಂಡದ ಮೇಲೆ ನಿರ್ಧರಿಸಲಾಗಿರುತ್ತದೆ. ಇದರಲ್ಲಿ ನಾಲ್ಕು ಮುಖಹೊಂದಿದ್ದರೆ. ಬ್ರಹ್ಮಕಾಂತದಲ್ಲಿ ಐದುಮುಖವಿದ್ದರೆ, ಶಿವಕಾಂತದಲ್ಲಿ ಆರು ಮುಖಗಳಿದ್ದರೆ, ಸ್ಕಂದಕಾಂತದಲ್ಲಿ ಎಂಟು ಮುಖವಿದ್ದರೆ, ವಿಷ್ಣುಕಾಂತದಲ್ಲಿ ಹದಿನಾರು ಅಥವಾ ವೃತ್ತಕಾರವಾಗಿದ್ದರೆ ರುದ್ರಕಾಂತ ಎಂದು ಮಾನಸಾರ ಗ್ರಂಥದಲ್ಲಿ ಹೇಳಿದೆ.[೬] ಈ ತರಹದ ಕಂಬನಿರ್ಮಾಣವನ್ನು ನೋಡುವುದಾದರೆ ತುಂಬ ವಿರಳ ಎನಿಸುತ್ತದೆ.

## ಕಂಬದ ಪ್ರಭೇದಗಳು

ಕಂಬಗಳಲ್ಲಿ ೧. ಪದ್ಯಕಾಂತ ೨. ಚಿತ್ರಸ್ತಂಭ ೩. ಕುಂಭಸ್ತಂಭ ೪. ಕೋಷ್ಠಿ ಸ್ತಂಭ ೫. ಸಂಯೋಗಾಸ್ತ ಸ್ತಂಭ ಎಂಬ ಐದು ಪ್ರಕಾರಗಳಿವೆ. ಇದರಲ್ಲಿ ಕುಂಭಸ್ತಂಭ, ಚಿತ್ರಸ್ತಂಭಗಳ ರಚನೆ ಅಲ್ಲಲ್ಲಿ ಕಾಣಬಹುದಾಗಿದೆ. ಹೆಚ್ಚಾಗಿ ಸರಳವಾದ ಸಾಧಾರಣ ಕಂಬದ ರಚನೆಗಳು ಹೆಚ್ಚು. ಕಂಬದ ರಚನೆಯ ಮೂಲ ಪೀಠವಾದರೆ ನಂತರ ಪಾದ, ದಂಡ, ಗ್ರೀವ ರಚನೆಗೊಂಡಿರುತ್ತವೆ. ಗ್ರೀವದ ಕೆಲ ಕೆಲಭಾಗಗಳು ಮೈತಳೆದಿರುತ್ತವೆ. ಕಲ್ಮಶ, ಹಾರಿಕಾ, ಆಸ್ಯ, ತಾಟಿಕ, ಕಂಠ, ಕುಂಭ, ನಿಮ್ನಕ, ಫಲಕ, ವೀರ ಇವುಗಳ ಮೇಲೆ ಬರುವ ಬೋದಿಗೆಗಳು ನಿರ್ಮಿಸಲಾಗಿರುತ್ತಾರೆ. ಬೋದಿಗೆಯಲ್ಲಿ ತರಂಗ ಬೋದಿಗೆ, ಪುಷ್ಪಬೋದಿಗೆ ಎಂಬ ಎರಡು ವಿಧಗಳು ಇರುತ್ತವೆ.[೭]

## ತರಂಗ ಬೋದಿಗೆ

ಅಲೆ ಅಲೆಯಾಗಿ ಕಾಣುವಂತೆ ರಚಿಸಿ ಆಲಂಕರಿಸಿದರೆ ಅದು ತರಂಗಬೋದಿಗೆ ಆಗುವುದು. ಈ ಬೋದಿಗೆಯಲ್ಲಿ ಮಧ್ಯಪಟ್ಟಿಕೆ ಇರುತ್ತದೆ. ಅದರ ಮೇಲೆ ಬಳ್ಳಿ ಅಥವಾ ವಿಭಿನ್ನ ಚಿತ್ರಗಳು ಇರುತ್ತವೆ. ಬೋದಿಗೆ ಕಂಬದ ಎರಡು ಕಡೆ ಚಾಚಿ ಉಳಿದೆರೆಡು ಭಾಗದಲ್ಲಿ ಚೌಕಕೃತಿಯ ಫಲಕ ಇರುತ್ತದೆ. ಇದನ್ನು ಮಾನಸಾರ ಎಂಬ ಗ್ರಂಥದಲ್ಲಿ ಮಧ್ಯಭದ್ರ ಎಂದು ತಿಳಿಸಿದೆ. ಈ ರೀತಿಯ ಕಂಬರಚನೆಯು ಕೆಲವು ದೇವಾಲಯಗಳಲ್ಲಿ ಕಂಡು ಬಂದಿದೆ.

## ಪುಷ್ಪ ಬೋದಿಗೆ

ಇದರ ಹೇಳಿಕೆಯನ್ನು ನೂಡುವುದಾದರೆ ಮಾನಸಾರಎಂಬ ಗ್ರಂಥದಲ್ಲಿ ಎಲೆ, ಬಳ್ಳಿ, ಚಿತ್ರಗಳಿಂದ ಆಲಂಕರಿಸಿ ಪುಷ್ಪ ಬೋದಿಗೆಯನ್ನು ರಚಿಸಬೇಕೆಂದು ಹೇಳಲಾಗಿದೆ. ಇದು ವಿಜಯನಗರ ಕಾಲದಲ್ಲಿ ಹೆಚ್ಚು ಕಂಡು ಬರುವುದು ಕಾನಾಹೊಸಹಳ್ಳಿ ಪರಿಸರದಲ್ಲಿ ಈ ಪುಷ್ಪ ಬೋದಿಗೆಯ ಕೆಲ ದೇವಾಲಯಗಳು ಕಂಡು ಬಂದಿವೆ. ಉದಾಹರಣೆಯಾಗಿ ಮಾರಮ್ಮ ದೇವಾಲಯ, ಕಲ್ಲೇಶ್ವರ ದೇವಾಲಯಗಳಲ್ಲಿ ಕಾಣಬಹುದು.

## ೪.೧ ಶೈವದೇವಾಲಯಗಳು

ಭಾರತೀಯ ಇತಿಹಾಸದಲ್ಲಿ ಶೈವಧರ್ಮಕ್ಕೆ ಅತ್ಯಂತ ಪ್ರಾಚೀನ ಇತಿಹಾಸವಿದೆ. ಹರಪ್ಪ ಸಂಸ್ಕೃತಿಯ ನೆಲೆಗಳಾದ ಹರಪ್ಪ, ಮೆಹೆಂಜೋದಾರೋ ಮತ್ತು ಕಾಲಿಬಂಗನ್ ಇತ್ಯಾದಿ ನೆಲೆಗಳಲ್ಲಿ ಅನೇಕ ಮುದ್ರೆಗಳು ದೊರೆತ್ತಿದ್ದು. ಅವುಗಳ ಮೇಲೆ ಪುರುಷ ದೇವತೆಗಳ ಚಿತ್ರಗಳಿವೆ. ಇವುಗಳಲ್ಲಿ ಯೋಗಮುದ್ರೆಯಲ್ಲಿ ಆಸಿನನಾಗಿರುವ ಮೂರು ಮುಖದ ಪಶುಪತಿ ಶಿವನ ಚಿತ್ರ ಪ್ರಮುಖವಾದುದು. ಬಹುಶಃ ಈ ಚಿತ್ರವೇ ಶಿವನ ಪ್ರಾಚೀನ ರೂಪವೆಂದು ಹೇಳಲಾಗುತ್ತದೆ. ಹಾಗಾಗಿ ಹರಪ್ಪ ಸಂಸ್ಕೃತಿಯ ಕಾಲದಲ್ಲಿ ಅಂದರೆ ಕ್ರಿ.ಪೂ.೨೫೦೦ ಕ್ಕೂ ಪೂರ್ವದಲ್ಲಿ ಶಿವರಾಧನೆ ಪ್ರಚಲಿತದಲ್ಲಿತ್ತೆಂದು ಹೇಳಬಹುದು. ನಂತರ ವೈದಿಕ ಸಾಹಿತ್ಯದಲ್ಲಿ ಶಿವನ ಹಿನ್ನೆಲೆಯಲ್ಲಿ ರುದ್ರನನ್ನು ಕಾಣಬಹುದು.[೮]

ಋಗ್ವೇದದ ಆರಂಭದ ಮಂಡಳಗಳಲ್ಲಿಯೇ ರುದ್ರನನ್ನು ಕುರಿತ ಉಲ್ಲೇಖಗಳಿವೆ. ಪ್ರಕೃತಿಯ ವಿನಾಶಕ, ಭಯಾನಕ, ಮೂರ್ತಿರೂಪ ರುದ್ರ ಎನ್ನುವ ಕಲ್ಪನೆ ಇಲ್ಲಿದ್ದಂತೆ ತೋರುತ್ತದೆ. ಹೀಗೆ ವೈದಿಕ ಕಾಲದಿಂದಲೂ ಬೆಳೆದು ಬಂದ ರುದ್ರ-ಶಿವನ ಪರಿಕಲ್ಪನೆ ಕ್ರಮೇಣ ಜನಸಾಮಾನ್ಯರ ಧಾರ್ಮಿಕ ಭಾವನೆಗಳು ಮತ್ತು ಆರಾಧನೆಗಳೊಡನೆ ಸೇರಿ ಶೈವಧರ್ಮದ ಬೆಳವಣಿಗೆಗೆ ಕಾರಣವಾಯಿತು. ಶಿವನು ಇಪ್ಪತ್ನಾಲ್ಕನೇ ಅವಾತರವೆಂದು ಹೇಳಲಾದ ಲಕುಲಿಶನಿಂದ ಪಾಶುಪಾತ ಮತ ಪ್ರಾರಂಭವಾಯಿತು. ಈತನ ನಾಲ್ಕು ಜನ ಶಿಷ್ಯರಾದ ಕುಶಿಕ, ಗರ್ಗ, ಮೈತ್ರೇಯ ಮತ್ತು ಕೌರುಶ ಇವರಿಂದ ನಾಲ್ಕು ಪ್ರತ್ಯೇಕ ಪಾಶುಪತಗಳುಂಟಾದವು. ಪಾಶುಪತದಿಂದ ಲಕುಲಿಶ, ಪಾಶುಪತ, ಕಾಳಾಮುಖ ಮತ್ತು ಕಾಪಾವಾಲಿಕ ಶೈವ ಪಂತಗಳು ಬೆಳೆದವು. ಕರ್ನಾಟಕದಲ್ಲಿ ಶಾತವಾಹನ-ಕದಂಬರ ಕಾಲಕ್ಕಾಗಲೇ ಶೈವಧರ್ಮವಿದ್ದುದ್ದಕ್ಕೆ ಸ್ಪಷ್ಟ ಆಧಾರಗಳಿವೆ. ಬಾದಾಮಿ ಚಾಲ್ಯುಕ್ಯರ ಕಾಲಕ್ಕಾಗಲೇ ಈ ಧರ್ಮ ಉಚ್ಛ್ರಾಯ ಸ್ಥಿತಿಯನ್ನು ತಲುಪಿತು. ಮಹಾಕೂಟವೂ ಶೈವ ಧರ್ಮದ ಪ್ರಧಾನ ಕೇಂದ್ರವಾಗಿದ್ದು, ಐಹೊಳೆಯ ರಾವಳಫಡಿ ಮತ್ತು ಬಾದಮಿಯ ಗುಹಾಲಯದಲ್ಲಿ ಇದರ ಪ್ರಭಾವವನ್ನು ಕಾಣಬಹುದು. ನಂತರ ರಾಷ್ಟ್ರಕೂಟ, ಕಲ್ಯಾಣದ ಚಾಲ್ಯುಕ್ಯ, ಹೊಯ್ಸಳ, ವಿಜಯ ನಗರ ಮುಂತಾದ ಮನೆತನಗಳ ಅರಸರ ಪ್ರೋತ್ಸಾಹ ಈ ಧರ್ಮವೂ ಅತ್ಯಂತ ಪ್ರಮುಖ ಧರ್ಮವಾಗಿ ಹೊರ ಹೊಮ್ಮಲು ಕಾರಣವಾಯಿತು.

ಶೈವ ಧರ್ಮದಲ್ಲಿ ಪೂಜಿಸಲ್ಪಡುವ ವಿವಿಧ ರೀತಿಯ ಶಿಲ್ಪಗಳ ಹಿನ್ನೆಲೆ ಮತ್ತು ಲಕ್ಷಣಗಳನ್ನು ಶಿಲ್ಪಶಾಸ್ತ್ರ ಗ್ರಂಥಗಳ ಸಹಾಯದಿಂದ ಇಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಕಾನಾಹೊಸಹಳ್ಳಿ ಗ್ರಾಮದಲ್ಲಿ ಕಂಡು ಬರುವ ಶೈವ ಧರ್ಮಕ್ಕೆ ಸೇರಿದ ದೇವಾಲಯಗಳನ್ನು ಕುರಿತಂತೆ ಈ ಕೆಳಕಂಡಂತೆ ಹೇಳಬಹುದಾಗಿದೆ.

**ಸಂಖ್ಯೆ** : ೦೧
**ಹೆಸರು** : ಕಲ್ಲೇಶ್ವರ ದೇವಸ್ಥಾನ
**ಸ್ಥಳ** : ಕಾನಾಹೊಸಹಳ್ಳಿ ಗ್ರಾಮದ ಮಧ್ಯಭಾಗದಲ್ಲಿ
**ಕಾಲ** : ಕ್ರಿ.ಶ.೧೩ನೇ ಶತಮಾನ
**ಅಭಿಮುಖ** : ಪೂರ್ವ
**ಶೈಲಿ** : ವಿಜಯನಗರೋತ್ತರ

ಈ ದೇವಾಲಯವು ಕಾನಾಹೊಸಹಳ್ಳಿ ಗ್ರಾಮದ ಮಧ್ಯಭಾಗದಲ್ಲಿದ್ದು, ಈ ದೇವಾಲಯ ಪೂರ್ವಭಿಮುಖವಾಗಿದೆ. ದೇವಾಲಯದ ಗರ್ಭಗೃಹ ಮಾತ್ರ ಮೂಲವಾಗಿದ್ದು, ಉಳಿದ ಮುಂಭಾಗ ಆಧುನಿಕವಾಗಿ ನಿರ್ಮಾಣ ಮಾಡಲಾಗಿದೆ. ದೇವಸ್ಥಾನದಲ್ಲಿ ೧೨ ಅರ್ಧಗಂಭಗಳಿದ್ದು, ೦೪ ಪೂರ್ಣಗಂಭಗಳಿವೆ. ದೇವಾಲಯವು ಮೂರು ಹಂತಗಳನ್ನು ಒಳಗೊಂಡಿದ್ದು ಗರ್ಭಗೃಹ, ಅಂತರಾಳ, ನವರಂಗವನ್ನು ಹೊಂದಿದೆ ಅಲ್ಲದೇ ದೇವಾಲಯದ ಗರ್ಭಗೃಹದ ದ್ವಾರಬಾಗಿಲಿನ ಎರಡು ಕಡೆ ದ್ವಾರಪಾಲಕರ ಉಬ್ಬು ಚಿತ್ರಗಳು ಹಾಗೂ ದ್ವಾರಬಾಗಿಲಿನ ಬಾಗಿಲುವಾಡದಲ್ಲಿ ಹೂವಿನ ಆಕೃತಿಯ ಸರಗಳಿಂದ ಶೃಂಗಾರಿಸಲಾಗಿದೆ. ಗರ್ಭಗೃಹದಲ್ಲಿ ಕಪ್ಪು ಶಿಲೆಯಿಂದ ಕೂಡಿದ ಈಶ್ವರನ ಲಿಂಗವಿದೆ. ವಿಶೇಷವೆಂದರೆ ಗರ್ಭಗೃಹದಲ್ಲಿ ಪೂಜಾವಸ್ತುಗಳನ್ನು ಹಿಡಲು ಅಟ್ಟಣಿಗೆಯನ್ನು ನಿರ್ಮಿಸಲಾಗಿದೆ. ಎದುರಿಗೆ ಅಂತರಾಳದಲ್ಲಿ ಬಸವಣ್ಣನ ಮೂರ್ತಿಯನ್ನು ಪ್ರತಿಷ್ಟಾಪಿಸಲಾಗಿದೆ. ನವರಂಗವು ಇತ್ತೀಚಿನ ದಿನಗಳಲ್ಲಿ ನಿರ್ಮಾಣ ಮಾಡಿರುವುದು ಕಂಡುಬರುತ್ತದೆ.

## ವೀರಗಲ್ಲು

ಈ ದೇವಸ್ಥಾನದ ಬಲಭಾಗದಲ್ಲಿ ಒಂದು ವೀರಗಲ್ಲು ಇದ್ದು, ಇದರ ಅಳತೆ ಎತ್ತರ ೭೪ಸೆಂ.ಮೀ. ಇದರ ಅಗಲ ೩೮ಸೆಂ.ಮೀ. ಇದ್ದು, ಮೂರು ಹಂತಗಳನ್ನು ಒಳಗೊಂಡಿದೆ. ಮೇಲ್ಭಾಗದಲ್ಲಿ ಸೂರ್ಯ, ಚಂದ್ರ ಇದ್ದು ನಂದಿ ಮತ್ತು ಲಿಂಗವನ್ನು ಪೂಜಿಸುತ್ತಿರುವಂತೆ ಅಸ್ಪಷ್ಟವಾಗಿ ಕಂಡುಬರುತ್ತದೆ. ಎರಡನೇ ಹಂತದಲ್ಲಿ ಧ್ಯಾನಮಗ್ನನಾಗಿ ಕುಳಿತಿರುವುದು ಕಂಡು ಬರುತ್ತದೆ. ಅಲ್ಲದೇ ಮೂರನೇ ಹಂತದಲ್ಲಿ ಯುದ್ಧದಲ್ಲಿ ಹೋರಾಡುತ್ತಿರುವ ಚಿತ್ರ ಕಂಡುಬರುತ್ತಿದ್ದು, ಬಳಪದ ಕಲ್ಲಿನಿಂದ ನಿರ್ಮಾಣ ಮಾಡಿರುವುದು ಕಂಡುಬರುತ್ತದೆ. ಅಲ್ಲದೇ ಪಕ್ಕದಲ್ಲಿ ವಿಘ್ನೇಶ್ವರನ ಮೂರ್ತಿಯು ಕಪ್ಪು ಕಲ್ಲಿನಲ್ಲಿ ಕಂಡು ಬಂದಿದೆ. ಇದನ್ನು ನೋಡಲು ತುಂಬಾ ಆಕರ್ಷಕವಾಗಿದೆ ಸದ್ಯದ ಸ್ಥಿತಿಯಲ್ಲಿ ಇದು ಪೂರ್ವಭಿಮುಖವಾಗಿ ಪ್ರತಿಷ್ಟಾಪಿಸಲಾಗಿದೆ.[1]

**ಸಂಖ್ಯೆ** : ೦೨
**ಹೆಸರು** : ಬಸವಣ್ಣ ದೇವಾಲಯ
**ಸ್ಥಳ** : ಕೆರೆಯ ಹಿಂಬಾಗ
**ಅಭಿಮುಖ** : ಉತ್ತರಾಭಿಮುಖ
**ಕಾಲ** : ಪಾಳೆಗಾರರು

ಈ ದೇವಾಲಯವು ಕಾನಾಹೊಸಹಳ್ಳಿ ಗ್ರಾಮದ ಕೆರೆಯ ಹಿಂಬಾಗದಲ್ಲಿ ಈ ದೇವಾಲಯವನ್ನು ನಿರ್ಮಿಸಲಾಗಿದೆ. ಈ ದೇವಾಲಯವು ಉತ್ತರಾಭಿಮುಖವಾಗಿ ನಿರ್ಮಾಣ ಮಾಡಲಾಗಿದೆ. ಅಲ್ಲದೇ ಈ ದೇವಾಲಯದ ಅಳತೆಯ ಅಗಲ ೮.೨ಅಡಿ. ಇದರ ಉದ್ದ ೮.೨ಅಡಿ ಹೊಂದಿದ್ದು ಚಚೌಕಕಾರವಾಗಿದೆ. ಈ ದೇವಾಲಯವನ್ನು ಸ್ಥಳಿಯವಾಗಿ ದೊರೆಯುವ ಕಲ್ಲು ಬಂಡೆಗಳಿಂದ ನಿರ್ಮಾಣ ಮಾಡಲಾಗಿದೆ. ಈ ದೇವಾಲಯದಲ್ಲಿ ಯಾವುದೇ ಕಂಬಗಳು ಕಂಡು ಬರುವುದಿಲ್ಲ ಅಲ್ಲದೇ ದೇವಾಲಯದ ಒಳಗಡೆ ಬಸವಣ್ಣನ ಮೂರ್ತಿಯಿದೆ ಮತ್ತು ದೇವಾಲಯದ ಭಿತ್ತಿ ಭಾಗದಲ್ಲಿ ಮತ್ಸ್ಯ, ಹಾವುಗಳ ಉಬ್ಬು ಶಿಲ್ಪಗಳು ಕಂಡುಬರುತ್ತವೆ. ಸ್ಥಳೀಯರು ಹಾಗೂ ಸುತ್ತಮುತ್ತಲಿನ ಹೊಲದವರು ವಿಶೇಷ ಸಂದರ್ಭಗಳಲ್ಲಿ ಪೂಜೆ ಸಲ್ಲಿಸುತ್ತಾರೆ.

ಸಂಖ್ಯೆ : ೦೩
ಹೆಸರು : ಬೀರಲಿಂಗೇಶ್ವರ
ಸ್ಥಳ : ಕಾನಾಹೊಸಹಳ್ಳಿಯ ಹೊರ ವಲಯದಲ್ಲಿ [ಪೂರ್ವಕ್ಕೆ]
ಅಭಿಮುಖ : ಪೂರ್ವಭಿಮುಖ
ಕಾಲ : ಪಾಳೆಗಾರರು

ಕಾನಾಹೊಸಹಳ್ಳಿ ಗ್ರಾಮದ ಪೂರ್ವಕ್ಕೆ ಇರುವಂತಹ ಈ ದೇವಾಲಯವು ಇಲ್ಲಿರುವಂತಹ ಜಮೀನುನಲ್ಲಿದೆ. ಈ ದೇವಾಲಯವು ಪೂರ್ವಭಿಮುಖವಾಗಿದ್ದು, ಈ ದೇವಾಲಯದ ಬಗ್ಗೆ ಸ್ಥಳೀಯರು ಹೇಳುವಂತೆ ಮೂಲತಃ ಕೆಲವು ಸಮುದಾಯದವರು ಒಕ್ಕಲೆದ್ದು ಬಂದು ಇಲ್ಲಿ ದಟ್ಟವಾದ ಕಾಡು ಇದ್ದ ಕಾರಣ ಇದರಲ್ಲಿ ಉಳಿದುಕೊಂಡು ಇಲ್ಲಿ ಈ ದೇವಾಸ್ಥಾನವನ್ನು ಸ್ಥಾಪಿಸಿದರು ಎಂದು ತಿಳಿದುಬರುತ್ತದೆ. ಇಲ್ಲಿ ಪ್ರಮುಖವಾಗಿ ಅಂದಿನಿಂದ ಇಲ್ಲಿಯವರೆಗೆ ಪ್ರತಿವರ್ಷ ಕುರುಬ ಸಮುದಾಯದವರು ಪ್ರತಿಶ್ರಾವಣ ಮಾಸದ ಮೂರನೆ ವಾರದಲ್ಲಿ ಇಲ್ಲಿರುವ ನಾಗರ ಕಲ್ಲಿಗೆ ಕುರುಬ ಸಮುದಾಯದವರು ಹಾಲನ್ನೆರೆವುದರ ಮೂಲಕ ಭಕ್ತಿಯನ್ನು ಸಮರ್ಪಿಸುತ್ತಾರೆ. ಈ ದೇವಾಸ್ಥಾನಕ್ಕೆ ಗರ್ಭಗುಡಿ, ಪ್ರಾಂಗಣವಿದ್ದು, ಸ್ಥಳೀಯವಾಗಿ ದೊರೆಯುವ ಚಪ್ಪಡೆಕಲ್ಲುಗಳನ್ನು ಬಳಸಿ ಈ ದೇವಾಲಯವನ್ನು ನಿರ್ಮಿಸಿದ್ದಾರೆ. ಗರ್ಭಗೃಹದಲ್ಲಿ ನಾಲ್ಕು ಕಲ್ಲಿನ ಕಂಭಗಳು ಇದ್ದು ಯಾವುದೇ ಮೂರ್ತಿ ಪ್ರತಿಸ್ಥಾಪಿಸಿಲ್ಲ.

### ೪.೨ ವೈಷ್ಣವ ದೇವಾಲಯಗಳು

ಭಾರತೀಯರ ಪ್ರಾಚೀನ ಧರ್ಮಗಳಲ್ಲಿ ವೈಷ್ಣವ ಧರ್ಮವೂ ಒಂದು. ಇದರ ಪ್ರಾರಂಭದ ಉಲ್ಲೇಖಗಳನ್ನು ವೈದಿಕ ಸಾಹಿತ್ಯದಲ್ಲಿ ನೋಡಬಹುದು. ನಂತರ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಸಾಂಬ ಮತ್ತು ಅನಿರುದ್ಧರೆನ್ನುವ ಪಂಚ ವೀರರು ಇದರ ಅನುಯಾಯಿಗಳು ಆಗಿದ್ದರಿಂದ ಇವರ ಆರಾಧನೆಯನ್ನು "ವೀರವಾದ" ಎಂದು ಕರೆಯಲಾಗುತ್ತದೆ. ಈ ವಾದದ ಪ್ರಕಾರ ವಾಸುದೇವನೇ ಶ್ರೇಷ್ಠ ಸಂಕರ್ಷಣ, ಪ್ರದ್ಯುಮ್ನ, ಮತ್ತು ಅನಿರುದ್ಧರು ಒಬ್ಬರಾದ ನಂತರ ಮತ್ತೊಬ್ಬರು ವಾಸುದೇವನಿಂದ ಅವಿರ್ಭವಿಸಿದ್ದರು. ಸುಮಾರು ಕ್ರಿ ಪೂ. ನಾಲ್ಕನೇ ಶತಮಾನದ ವೇಳೆಗೆ ಮಥುರಾ ಪ್ರದೇಶದ ಜನರು ವಾಸುದೇವ ಅಥವಾ ಶ್ರೀಕೃಷ್ಣನ ಪೂಜೆಯನ್ನು ಮಾಡುತ್ತಿದ್ದರೆಂದು ಗ್ರೀಕ್ ರಾಯಭಾರಿ ಮೆಗಾಸ್ತಾನೀಸ್ ಮತ್ತು ಪಾಣಿಯರು ಅಭಿಪ್ರಾಯ ಪಟ್ಟಿದ್ದಾರೆ. ಕ್ರಿಪೂ.ಮೂರನೆ ಶತಮಾನದ ಬೆಸನಗರದ ಶಾಸನದಲ್ಲಿ ಗ್ರೀಕ್ ರಾಯಭಾರಿ ಎಲಿಯೋಡೋರೆಸ್ ಭಾಗವತನಾಗಿದ್ದು ಗರುಡ ಧ್ವಜವನ್ನು ನಿರ್ಮಿಸಿ "ದೇವ ದೇವನಾದ ವಾಸುದೇವನನ್ನು ಪೂಜಿಸುವ ಪರಮ ಭಾಗವತ ನಾನು" ಎಂದು ತನನ್ನು ಕರೆದುಕೊಂಡಿದ್ದಾನೆ.

ಕ್ರಿ.ಶ.ಆರಂಭದ ವೇಳೆಗೆ ಭಾಗವತ ಧರ್ಮವು ಉತ್ತರ ಪ್ರದೇಶ, ರಾಜಸ್ತಾನ, ಮದ್ಯಪ್ರದೇಶ ಮತ್ತು ದಖನ್ ಪ್ರದೇಶಗಳಲ್ಲಿ ವ್ಯಾಪಿಸಿತು.[೧೦] ಶಾತವಾಹನರ ಕಾಲದಲ್ಲಿ ಕರ್ನಾಟಕದಲ್ಲಿ ಪ್ರಚಾರವಾದಂತೆ ತೋರುತ್ತದೆ. ಗೌತಮಿ ಪುತ್ರ ಶಾತಕರ್ಣಿಯನ್ನು ರಾಮ(ಬಲರಾಮ), ಕೇಶವ(ಕೃಷ್ಣ) ಹಾಗೂ ಇನ್ನಿತರ ಪೌರಾಣಿಕ ವ್ಯಕ್ತಿಗಳಿಗೆ ಹೋಲಿಸಲಾಗಿದೆ. ಪಲ್ಲವರು ತಮ್ಮನ್ನು ಶಾಸನಗಳಲ್ಲಿ ಪರಮಭಾಗವತರೆಂದು ಕರೆದುಕೊಂಡಿದ್ದಾರೆ. ಆದಿ ಕದಂಬರು, ಗಂಗರ ಕಾಲಕ್ಕಾಗಲೇ ಈ ಧರ್ಮವು ವ್ಯಾಪಕವಾಗಿ ಹರಡಿದ್ದನ್ನು ಹಲವಾರು ಶಾಸನಗಳ, ಶಿಲ್ಪಗಳ ಸಹಾಯದಿಂದ ನೋಡಬಹುದು.

## ಆಂಜನೇಯ ದೇವಾಲಯ

ಸಂಖ್ಯೆ : ೦೪

ಶಿಲ್ಪ : ಆಂಜನೇಯನ ಶಿಲ್ಪ

ಸ್ಥಳ : ಗ್ರಾಮದ ದ್ವಾರ ಬಾಗಿಲಿನ ಪಕ್ಕದಲ್ಲಿ

ಅಭಿಮುಖ ; ದಕ್ಷಿಣಾಭಿಮುಖ

ಕಾಲ : ವಿಜಯನರೊತ್ತರ

ಈ ದೇವಾಲಯವು ಕಾನಾಹೊಸಹಳ್ಳಿ ಗ್ರಾಮದ ದ್ವಾರ ಬಾಗಿಲಿನ ಪಕ್ಕದಲ್ಲಿದ್ದು, ದೇವಾಲಯವು ದಕ್ಷಿಣಾಭಿಮುಖವಾಗಿ ನಿರ್ಮಾಣಮಾಡಲಾಗಿದೆ. ಈ ದೇವಾಲಯದಲ್ಲಿ ಗರ್ಭಗೃಹ, ನವರಂಗ, ಆಧುನಿಕವಾಗಿ ನಿರ್ಮಾಣಮಾಡಲಾಗಿದೆ ಗರ್ಭಗೃಹದಲ್ಲಿ ಆಂಜನೇಯನ ಉಬ್ಬು ಶಿಲ್ಪವಿದ್ದು, ಗರ್ಭಗೃಹದ ಮುಂಭಾಗದಲ್ಲಿ ೦೬ಅರ್ಧಕಂಭ, ೦೪ಪೂರ್ಣಕಂಭಗಳಿಂದ ಕೂಡಿದ್ದು, ದೇವಾಸ್ಥಾನದ ಪಶ್ಚಿಮ ದಿಕ್ಕಿನಲ್ಲಿ ನವಗ್ರಹಗಳಾದ ಸೂರ್ಯ, ಚಂದ್ರ, ಬುಧ, ಗುರು, ಶುಕ್ರ, ಶನಿ, ಕುಜ, ರಾಹು, ಕೇತುಗಳ ಕಪ್ಪು ಶಿಲೆಯಿಂದ ನಿರ್ಮಿತವಾದ ನವಗ್ರಹಗಳು ಕಂಡುಬರುತ್ತವೆ. ಅಲ್ಲದೆ ದೇವಾಸ್ಥಾನದ ಮುಂಭಾಗದಲ್ಲಿ ಗರುಡು ಸ್ಥಂಭವನ್ನು ಕಾಣಬಹುದಾಗಿದೆ. ಈ ದೇವಾಸ್ಥಾನದಲ್ಲಿರುವ ನವಗ್ರಹಗಳನ್ನು ಕುರಿತು ಹೇಳುವುದಾದರೆ ಈ ಕೆಳಗಿನ ರೀತಿಯಲ್ಲಿ ತಿಳಿದುಬರುತ್ತದೆ.

## ನವಗ್ರಹಗಳು

ನವಗ್ರಹಗಳ ಪೂಜೆ ಸ್ಮೃತಿಗಳ ಕಾಲದಲ್ಲಿಯೇ ಕಾಣಿಸಿಕೊಳ್ಳುತ್ತದೆ. ಜನರ ಆಯುಷ್ಯಕ್ಕೂ, ಸ್ಥಿತಿಗತಿಗಳಿಗೂ, ಸಂಕಟ ಸಂತೋಷಗಳಿಗೂ ನವಗ್ರಹಗಳೇ ಕಾರಣವೆನ್ನುವ ನಂಬಿಕೆಯೂ ಹಳೆಯದು. ನವಗ್ರಹಗಳಿಗೇ ಪ್ರತ್ಯೇಕವಾದ ಗುಡಿಯು ಅಪರೂಪವಾದರು ಎಲ್ಲಾ ದೇವಾಲಯಗಳಲ್ಲಿಯೂ (ವಿಶೇಷವಾಗಿ ಶಿವ ಮತ್ತು ಆಂಜನೇಯ ದೇವಾಲಯಗಳಲ್ಲಿ) ನವಗ್ರಹಗಳಿಗೆ ಪ್ರತ್ಯೇಕವಾಗಿ ಜಾಗವಿರುವುದು ವಾಡಿಕೆ. ನವಗ್ರಹಗಳ ಪೂಜೆ ಮನೆಗಳಲ್ಲಿ ವಿಶೇಷಸಂದರ್ಭಗಳಲ್ಲಿ ನಡೆಯುತ್ತದೆ. ಗ್ರಹಶಾಂತಿಯಂತೂ ಎಲ್ಲರಿಗೂ ತಿಳಿದ ವಿಚಾರವೇ. ವ್ಯವಹರದ ವಾರದ ದಿನಗಳ ಹೆಸರುಗಳು ಗ್ರಹಗಳನ್ನೆ ಅಧಿಕರಿಸಿವೆ. ನವಗ್ರಹಳೆಂದರೆ ಸೂರ್ಯ, ಚಂದ್ರ, ಕುಜ, ಬುಧ, ಬೃಹಸ್ಪತಿ, ಶುಕ್ರ, ಶನಿ, ರಾಹು, ಮತ್ತು ಕೇತು ಇವರಲ್ಲಿ ಸೂರ್ಯನೇ ಪ್ರಮುಖವಾದವನು.[೧೧]

## ಸೂರ್ಯ

ನವಗ್ರಹಗಳಲ್ಲಿ ಸೂರ್ಯನೇ ಪ್ರಧಾನ ದೇವತೆ. ಇತರ ಗ್ರಹಗಳಿಗೂ ಸುತ್ತಲೂ ಬೇರೆ ಬೇರೆ ಗುಡಿಗಳಿವೆ. ವೇದಯುಗದಿಂದ ಬೆಳೆದುಬಂದ ಸೂರ್ಯಕಲ್ಪನೆಯೂ ಪೌರಾಣಿಕ, ತಾಂತ್ರಿಕ ಯುಗದಲ್ಲಿ ಸ್ವಾರಸ್ಯವಾಗಿ ಬೇರೂರಿತು. ಸೂರ್ಯನು ಕ್ಷತ್ರಿಯನೆಂದು, ಕಶ್ಯಪ ಋಷಿಯ ಮಗನೆಂದು, ಕಳಿಂಗ ರಾಜ್ಯದ ಅರಸನೆಂದು, ಸಿಂಹಧ್ವಜನೆಂದೂ ವಿವರಗಳು ಮೂಡಿಕೊಂಡವು. ರಾಜ್ಞೀ, ಸ್ವರ್ಣಾ, ಛಾಯಾ, ಸುವರ್ಣಾರ್ಚಸಾ, ಎಂಬ ನಾಲ್ವರು ಹೆಂಗಳೆಯರು ಅವನ ಹೆಂಡತಿಯರಾದರು. ರೇವಂತ, ಯಮ, ಸಾವರ್ಣಿ, ಪ್ರಭಾತ, ಶನಿ ಮತ್ತು ಮರುತ್ತುಗಳು ಮಕ್ಕಳಾದರು. ದಂಡಾಲಪಿಂಗಳ ಮತ್ತು ಅತ್ರಿಪಿಂಗಳ ಎಂಬಿಬ್ಬರು ಪರಿಚಾರಕರಾದರು ಧಾತ್ರಿ, ಮಿತ್ರ, ಅರ್ಯಮನ್, ರುದ್ರ, ವರುಣ, ಸೂರ್ಯ, ಭಗ, ವಿವಸ್ವಾನ್, ಪೊಷನ್, ಸವಿತೃ, ತ್ವಷ್ಟೃ, ವಿಷ್ಣು ಇವರು ದ್ವಾದಶಾದಿತ್ಯರಾದರು. ಅವನನ್ನು ಚಿತ್ರಿಸುವಾಗ ತಾಮ್ರವರ್ಣದ ಕುಬ್ಜನಂತೆ ಆರು ಕೈಗಳಿರುವಂತೆ, ನಿಂತಿರುವಂತೆ ಕಾಣಿಸುವುದು ವಾಡಿಕೆ. ಅವನ ರಥಕ್ಕೆ ಒಂದೆ ಗಾಲಿ. ಅದನ್ನು ಎಳೆಯಲು ನಾಲ್ಕು ಅಥವಾ ಏಳು ಕುದುರೆಗಳು ಒಮ್ಮೊಮ್ಮೆ ಏಳುತಲೆಗಳ ಒಂದು ಕುದುರೆಯನ್ನು ಅಳವಡಿಸಿರುವುದು ಉಂಟು. ಈ ರಥಕ್ಕೆ ಸಾರಥಿ ಅರುಣನೆಂಬುವನು ಕಶ್ಯಪನ ಮಗನಾಗಿ ಗರುಡನ ಅಣ್ಣನಾದವನು. ನವಗ್ರಹಗಳೊಂದಿಗೆ ಇರುವಾಗ ನಡುವೆ ಪೂರ್ವಕ್ಕೆ ಮುಖಮಾಡಿ, ಎರಡು ಕೈಗಳಲ್ಲಿ ಕಮಲಗಳನ್ನು ಹಿಡಿದು ನಿಂತಿರುತ್ತಾನೆ.

## ಚಂದ್ರ

ಸೂರ್ಯನಿಗೆ ಈಶಾನ್ಯದಲ್ಲಿ ಚಂದ್ರ ಅಥವಾ ಸೋಮನಿರುತ್ತಾನೆ. ಈ ದೇವತೆಗೂ ವೈಧಿಕ ಹಿನ್ನೆಲೆಯಿದೆ. ಮಳೆಯ ನೀರಿಗೆ ಔಷಧಿ, ವನಸ್ಪತಿಗಳಿಗೆ ಒಡೆಯನಾದ ಚಂದ್ರನನ್ನು ಪೂರ್ವಭಿಮುಖವಾಗಿಯೆ ಬಿಳಿ ಬಟ್ಟೆಯನ್ನುಟ್ಟು ಗಧೆ-ಕುಮುದ ಪುಷ್ಪಗಳನ್ನು ಹಿಡಿದು ನಿಂತಿರುವ ಬಿಳಿ ಬಣ್ಣದ ದ್ವಿಭುಜ ದೇವತೆಯಂತೆ ಕಾಣಿಸುತ್ತಾರೆ. ಜಾತಿಯಲ್ಲಿ ಅವನನ್ನು ವೈಶ್ಯನಂತೆ ರೋಹಿಣಿ ಅವನ ಹೆಂಡತಿ, ಅವನ ವಾಹನ ಜಿಂಕೆ, ಅವನ ರಥಕ್ಕೆ ಎರಡು ಗಾಲಿಗಳು ಮೂರೆಂದು ಒಂದು ಅಭಿಪ್ರಾಯವಿದೆ. ಅದನ್ನು ಎಳೆಯುವವು ಹತ್ತು ಕುದುರೆಗಳು ಬಿಳಿ ಬಣ್ಣದವು ಸಾರಥಿಗಳು ಇಬ್ಬರು. ಚಂದ್ರನ ತಂದೆ ಅತ್ರಿಯೆಂದು ತಾಯಿ ಅನುಸೂಯೆ ಎಂದು ಪುರಾಣದ ವಿವರಗಳು ಇವೆ. ಇವನದು ಬಿಳಿಯ ಮಂಡಲ.

## ಕುಜ

ಕುಜ (ಅಥವಾ ಮಂಗಳ) ಸೂರ್ಯನಿಗೆ ಪೂರ್ವಕ್ಕಿರುವ ಗ್ರಹ. ಇವನು ಆವಂತಿಯ ಕ್ಷತ್ರಿಯನೆಂದು ಭರದ್ವಾಜ ಮುನಿ ಮತ್ತು ಭೂಮಿಯರ ಮಗನೆಂದು ಕಲ್ಪನೆಯಿದೆ. ನವಗ್ರಹಗಳಲ್ಲಿ ಇದ್ದಾಗ ಸೂರ್ಯನ ಪಕ್ಕದಲ್ಲಿ ದಕ್ಷಿಣಕ್ಕೆ ಮುಖಮಾಡಿ ಕೆಂಪು ಬಟ್ಟೆಯನ್ನುಟ್ಟು, ಚತುರ್ಭುಜನಾಗಿ ದಂಡ, ಶಕ್ತಿ-ಆಯುಧಗಳನ್ನು ಹಿಡಿದು ವರದಾಭಯಮುದ್ರೆಗಳಲ್ಲಿ ಇರುತ್ತಾನೆ. ಇವನ ವಾಹನ ಮೇಕೆ, ಮಂಡಲ ಕೆಂಪು ಬಣ್ಣದ ತ್ರಿಕೋಣ.

## ಬುಧ

ಸೂರ್ಯನ ವಾಯುವ್ಯ ಕೋಣೆಯಲ್ಲಿ ಉತ್ತರಾಭಿಮುಖನಾಗಿ ಇರುವ ಗ್ರಹವೇ ಬುಧಗ್ರಹವಾಗಿದೆ. ಇವನು ಮಗಧ ದೇಶದ ವೈಶ್ಯಜಾತಿಗೆ ಸೇರಿದವನೆಂದು ಅತ್ರಿ ವಂಶಕ್ಕೆ ಸೇರಿದವನೆಂದು ಚಂದ್ರನ ಮಗನೆಂದು ವಿವರಗಳಿವೆ. ಇವನ ಮೈಬಣ್ಣ ಹಳದಿ ಕರ್ಣಿಕಾರ ಪುಷ್ಪಗಳಿಂದ ಆಲಂಕೃತವಾದುದು. ನಾಲ್ಕು ಕೈಗಳು ಅಥವಾ ಎರಡೇ ಕೈಗಳು ಇರುವವು. ನಾಲ್ಕು ಕೈಗಳಿದ್ದಾಗ ಗದೆ ಮತ್ತು ಖೇಟಕ ಆಯುಧಗಳು. ಎರಡೇ ಕೈಗಳಿದ್ದಾಗ

ಬದ್ಧಾಂಜಲಿ ಮುದ್ರೆ, ಸರ್ಪನುಸಾನ ಇರುವುದು. ವೈಶಿಷ್ಟ್ಯ ಹಸಿರು ಬಣ್ಣದ ಗುದ್ಧಲಿಯಾಕಾರದ ಮಂಡಲ ಇವನದು.

## ಗುರು

ಬೃಹಸ್ಪತಿ (ಅಥವಾ ಗುರು) ಸೂರ್ಯನ ಪಕ್ಕದಲ್ಲಿ ಪಶ್ಚಿಮಕ್ಕೆ ಇರುವ ಗ್ರಹವೇ ಗುರು. ಆಂಗಿರಸ ವಂಶದ ಬ್ರಾಹ್ಮಣನೆಂದು, ಸಿಂಧೂ ದೇಶದವನೆಂದು, ಪ್ರಭಾಸ ಕ್ಷೇತ್ರದಲ್ಲಿ ಶಿವನನ್ನು ಕುರಿತು ಒಂದು ಸಾವಿರ ವರ್ಷ ತಪಸ್ಸು ಮಾಡಿ ಗ್ರಹದ ಸ್ಥಾನವನ್ನು ಪಡೆದನೆಂದು ವಿವರಗಳಿವೆ. ಅವನ ಹೆಂಡತಿ ತಾರೆಯನ್ನು ಚಂದ್ರನು ಕದ್ದೊಯ್ದು ಅವಳಿಂದ ಬುಧನೆಂಬ ಮಗನನ್ನು (ಗ್ರಹ) ಪಡೆದನೆಂದು ಪುರಾಣದ ಕಥೆಯಿದೆ. ದೇವತೆಗಳ ಆಚಾರ್ಯನಾದ ಇವನನ್ನು ಬಂಗಾರದ ಸಿಂಹಾಸನದ ಮೇಲೆ ಉತ್ತರಕ್ಕೆ ಮುಖ ಮಾಡಿ ಕುಳಿತಂತೆ ಕಾಣಿಸುತ್ತಾರೆ. ಇವನ ವಾಹನ ಹಂಸವೆಂದು ಕಲ್ಪನೆಯಿದೆ. ನಾಲ್ಕು ಕೈಗಳ ಈ ದೇವತೆ ಕಮಂಡಲೂ, ಅಕ್ಷಮಾಲೆ ಮತ್ತು ಪುಸ್ತಕಗಳನ್ನು ಹಿಡಿದಿರುತ್ತಾನೆ.

## ಶುಕ್ರ

ಸೂರ್ಯನಿಗೆ ಉತ್ತರ ದಿಕ್ಕಿನಲ್ಲಿರುವ ಶುಕ್ರನು ಭೃಗುವಂಶದ ಬ್ರಾಹ್ಮಣ. ಕಾರಣಾಂತರದಿಂದ ಇವನಿಗೂ ದೇವತೆಗಳ ಗುರುವಾದ ಬೃಹಸ್ಪತಿಗೂ ವೈಮನಸ್ಸುವುಂಟಾಗಿ ಶುಕ್ರನು ದೈತ್ಯರ ಗುರುವಾಗಲೂ ಒಪ್ಪಿಕೊಂಡ. ದೈತ್ಯರು ದೇವತೆಗಳ ಶತ್ರುಗಳು ತಾನೆ ? ಬೃಹಸ್ಪತಿಯ ಮಗನಾದ ಕಚನೇ ಇವನ ಬಳಿ ಶಿಷ್ಯನಾಗಿದ್ದು, ಮೃತಸಂಜೀವಿನಿ ವಿದ್ಯೆಯನ್ನು ಕಲಿತನೆಂದು ಕಥೆಯಿದೆ. ಶುಕ್ರನ ಮಕ್ಕಳಾದ ಚಂಡ ಮತ್ತು ಮರ್ಕ ಇವರಿಬ್ಬರೂ ದೈತ್ಯರ ದೊರೆಯಾದ ಹಿರಣ್ಯಕಶಿಪುವಿನ ಗುರುಗಳಾದರು. ಬಿಳಿ ಬಣ್ಣದ ಈ ಗ್ರಹಕ್ಕೆ ಬೃಹಸ್ಪತಿಗೆ ಇರುವಂತೆಯೇ ನಾಲ್ಕು ಕೈಗಳು, ಅದೇ ಆಯುಧಗಳು ಐಶ್ವರ್ಯಕ್ಕೆ ಒಡೆಯನೆಂದು ನಿಧಿಪಾತ್ರೆಯನ್ನು ಹಿಡಿದಿರುವಂತೆಯೂ ಚಿತ್ರಿಸಿರುತ್ತಾರೆ. ಪೂರ್ವಭಿಮುಖನಾಗಿರುವ ಈ ಗ್ರಹಕ್ಕೆ ಪಂಚಕೋಣದ ಮಂಡಲವಿದೆ.

## ಶನಿ

ಶನಿ (ಅಥವಾ ಶನೈಶ್ವರ, ಎಂದರೆ ನಿಧಾನವಾಗಿ ಚಲಿಸುವವನು) ಸೌರಾಷ್ಟ್ರ ದೇಶದ ಶೂದ್ರನೆಂದು ಕಾಶ್ಯಪ ವಂಶದವನೆಂದು, ಸೂರ್ಯ–ಛಾಯೆಯರ ಮಗನೆಂದು, ವಿವರಗಳಿವೆ. ಗ್ರಹವಿನ್ಯಾಸದಲ್ಲಿ ಸೂರ್ಯನಿಗೆ ದಕ್ಷಿಣಕ್ಕೆ ಪಶ್ಚಿಮಭಿಮುಖನಾಗಿರುವ ಗ್ರಹ ಇದು. ಕರಿಯ ಬಣ್ಣದ ಕುಳ್ಳ ಮೈ ಇವನದು ನಾಲ್ಕು ಕೈಗಳು ದಂಡ–ಅಕ್ಷಮಾಲೆಗಳನ್ನು ಧರಿಸಿರುತ್ತಾನೆ, ಕೆಲವೊಮ್ಮೆ ಧನುರ್ಬಾಣಧಾರಿ. ಸೂರ್ಯನ ದಕ್ಷಿಣಕ್ಕೆ ಇವನ ಸ್ಥಾನ, ಅರ್ಧ ಚಂದ್ರಾಕೃತಿಯ ·ಕರಿಬಣ್ಣದ ಮಂಡಲ ಇವನದು. ನವಗ್ರಹ ಪೂಜೆಯಲ್ಲಿ ಶನಿಯನ್ನು ಸುಮುಖನಾಗಿಸಿಕೊಳ್ಳುವುದೇ ಮುಖ್ಯವೆಂದು ಎಣಿಕೆಯಿದೆ. ಕೆಲವು ಕಡೆ ಶನಿಗಾಗಿಯೇ ಪ್ರತ್ಯೇಕ ಗುಡಿಗಳಿರುತ್ತವೆ. ಗ್ರಾಮೀಣ ಜನರಲ್ಲಿ ಶನಿದೇವರ ಮಹಾತ್ಮೆ ವಿಶೇಷವಾಗಿ ಬಳಕೆಯಲ್ಲಿದೆ.

## ರಾಹು–ಕೇತು

ಉಳಿದ ಗ್ರಹಗಳೆಂದರೆ ರಾಹು–ಕೇತು. ವಾಸ್ತವವಾಗಿ ಇವೆರೆಡು ಕೂಡಿ ಒಂದೇ ಗ್ರಹ. ಸಮುದ್ರಮಂಥನ ಕಾಲದಲ್ಲಿ ಹೊರಬಂದ ಅಮೃತವನ್ನು ದೇವತೆಗಳೇ ಪಡೆದರಷ್ಟೆ. ವಿಷ್ಣುವು ಮೋಹಿನಿಯಾಗಿ ದೈತ್ಯರನ್ನು ವಂಚಿಸಿ ದೇವತೆಗಳಿಗೆ ಮಾತ್ರ ಅಮೃತವನ್ನು ಹಂಚುತ್ತಿರುವಾಗ ಕಲಶದಿಂದ ಹುಲ್ಲಿನ ಮೇಲೆ ಬಿದ್ದ

ಹನಿಗಳನ್ನಾದರು ಪಡೆಯಬೇಕೆಂದು ರಾಹುವೆಂಬ ದೈತ್ಯನು ಹಾವಿನ ರೂಪವನ್ನು ತಳೆದು ಅಮೃತವನ್ನು ನೆಕ್ಕುತ್ತಿರುವುದನ್ನು ಸೂರ್ಯ-ಚಂದ್ರರು ಪತ್ತೆ ಮಾಡಿ ವಿಷ್ಣುವಿಗೆ ತಿಳಿಸಿಬಿಟ್ಟರು. ತನ್ನ ಚಕ್ರದಿಂದ ವಿಷ್ಣು ಹಾವನ್ನು ಕತ್ತರಿಸಲು ತಲೆಯ ಭಾಗ ರಾಹುವಾಗಿಯೇ ಉಳಿಯಿತು, ಬಾಲದಭಾಗ ಕೇತುವಾಯಿತು. ಅಮೃತವನ್ನಾಗಲೇ ತಿಂದಿದ್ದರಿಂದ ರಾಹುವಿಗೆ ಸಾವು ಬರುವಂತೆಯಿರಲಿಲ್ಲ. ಅಂತೂ ಒಬ್ಬನೇ ದೈತ್ಯ ಇಬ್ಭಾಗವಾಗಿ ಎರಡು ಗ್ರಹಗಳು ಮೈದಳೆದವು. ರಾಹುವನ್ನು ಸೂರ್ಯನಿಗೆ ಆಗ್ನೇಯ ದಿಕ್ಕಿನಲ್ಲಿಯು, ಕೇತುವನ್ನು ನೈರುತ್ಯ ದಿಕ್ಕಿನಲ್ಲಿಯೂ ಅಳವಡಿಸುತ್ತಾರೆ. ಎರಡು ಗ್ರಹಗಳು ದಕ್ಷಿಣಕ್ಕೆ ಮುಖಮಾಡಿರುತ್ತವೆ. ರಾಹುವಿಗೆ ಮನುಷ್ಯನ ಮುಖ, ಹಾವಿನ ಮೈ, ಕೇತುವಿಗೆ ಹಾವಿನ ಮುಖ, ಮನುಷ್ಯನ ಮೈ. ಇವರಿಬ್ಬರಿಗೂ ಎರಡೆ ಕೈಗಳು ಬದ್ದಾಂಜಲಿ ಮುದ್ರೆಯಲ್ಲಿ ರಾಹುವು ಪೈಠಾಣದ ಶೂದ್ರನೆಂದೂ ವಿಪ್ರಚಿತ್ತಿ-ಸಿಂಹಿಕೆಯರ ಮಗನೆಂದು ಕೇತುವು ಕುಶದ್ವೀಪದ ಶೂದ್ರನೆಂದೂ ವಿವರಗಳಿವೆ. ತಮ್ಮ ಗುಟ್ಟನ್ನು ಬಯಲಿಗೆಳವುದಕ್ಕಾಗಿ ಅವರು ಸೂರ್ಯ-ಚಂದ್ರರ ಮೇಲೆ ಸೇಡುತೀರಿಸಿಕೊಳ್ಳಲು ಹವಣಿಸುವುದೇ ಗ್ರಹಣವೆಂದು ನಂಬಿಕೆಯಿದೆ.

ಸಂಖ್ಯೆ : ೦೫
ಶಿಲ್ಪ : ಆಂಜನೇಯನ ಶಿಲ್ಪ
ಸ್ಥಳ : ವೀರಗೊಂಡನಹಳ್ಳಿ (ಕಾನಾಹೊಸಹಳ್ಳಿ)
ಅಭಿಮುಖ : ದಕ್ಷಿಣಾಭಿಮುಖ
ಕಾಲ : ವಿಜಯನಗರೊತ್ತರ

ಈ ದೇವಾಲಯವು ಕಾನಾಹೊಸಹಳ್ಳಿಯ ಪೂರ್ವಕ್ಕಿರುವಂತಹ ಹಳೆಯ ಊರಾದ ವೀರಗೊಂಡನಹಳ್ಳಿಯಲ್ಲಿದ್ದು. ಈ ದೇವಾಲಯವು ದಕ್ಷಿಣಾಭಿಮುಖವಾಗಿರುವುದು. ಅಲ್ಲದೆ ದೇವಾಲಯದಲ್ಲಿ ೧೨ ಕಲ್ಲಿನ ಅರ್ಧಕಂಭಗಳು ನಾಲ್ಕು ಪೂರ್ಣಕಂಭಗಳು ಇವೆ. ದೇವಾಲಯದಲ್ಲಿ ಆಂಜನೇಯನ ಉಬ್ಬುಶಿಲ್ಪವು ೦೩ ಅಡಿ ಎತ್ತರ, ೦೨ ಅಡಿ ಅಗಲವಾಗಿ ಈ ಮೂರ್ತಿಯಿದೆ. ಪ್ರತಿವರ್ಷ ಈ ದೇವಾಸ್ಥಾನದಲ್ಲಿ ಸ್ಥಳಿಯರು ಅನ್ನದಾಸೋಹ ಮುಂತಾದ ಕಾರ್ಯಕ್ರಮಗಳನ್ನು ನೆಡೆಸುತ್ತಾರೆ. ಎಂದು ಸ್ಥಳೀಯರ ಮೂಲಕ ತಿಳಿದುಬಂದಿದೆ. ಅಲ್ಲದೆ ಈ ದೇವಾಸ್ಥಾನದ ಸುತ್ತಮುತ್ತ ಹಿಂದೆ ವಾಸಿಸುತಿದ್ದ ಕೆಲವು ಮನೆಯ ಬುನಾದಿ ಹಾಗೂ ಒಂದು ಕೋಟೆಯು ಇದ್ದ ತಳಪಾಯ ಕಂಡುಬರುತ್ತದೆ. ಪ್ರಸ್ತುತ ಈ ಸ್ಥಳದಲ್ಲಿ ಯಾವುದೇ ಜನಸಮೂಹ ವಾಸಿಸುವುದಿಲ್ಲ ಎಂದು ಹೇಳಲಾಗಿದೆ.

## ೪.೩ ಶಾಕ್ತ ದೇವಾಲಯಗಳು

ವೈವಿಧ್ಯ ಸಂಸ್ಕೃತಿಯನ್ನು ಹೊಂದಿರುವ ಭಾರತ ದೇಶದಲ್ಲಿ ಮಹಿಳೆಗೆ ವಿಶೇಷಸ್ಥಾನವಿದೆ. ಭಾರತದ ಇತಿಹಾಸ ಆರಂಭದ ಕಾಲವನ್ನು ನೋಡಿದರೆ ಒಂದಾರ್ಥದಲ್ಲಿ ಮಾತೃದೇವತೆ ಆರಾಧನೆಯ ಸಮಾಜವನ್ನು ನೋಡಬಹುದು. ಭಾರತದ ಪ್ರಾಚೀನ ಹರಪ್ಪ ಸಂಸ್ಕೃತಿಯಲ್ಲಿ ಮಾತೃದೇವತೆಗೆ ಪ್ರಮುಖ ಸ್ಥಾನವಿದುದ್ದನ್ನು ನಾವು ಇತಿಹಾಸದ ಪುಟಗಳಿಂದ ನೋಡಿದ್ದೇವೆ. ಹೀಗೆ ಕ್ರಿ.ಪೂ.೩೦೦೦ ವರ್ಷಗಳ ಕಾಲದಲ್ಲಿ ಅಸ್ತಿತ್ವಕ್ಕೆ ಬಂದ ಮಾತೃ ದೇವತಾರಾಧನೆಯೇ ಶಾಕ್ತ ಸಂಪ್ರದಾಯದ ಮೂಲಾಧಾರ. ಹಾಗಾಗಿ ಭಾರತದ ಶಿಲ್ಪಕಲೆಯ ಇತಿಹಾಸವನ್ನು ನೋಡಿದರೆ ಹಲವು ರೀತಿಯ ಶಕ್ತಿದೇವತೆಯ ಶಿಲ್ಪಗಳು ಕಂಡುಬರುವುದನ್ನು ನೋಡಬಹುದು. ಇವರಲ್ಲಿ ಪ್ರಮುಖವಾಗಿ ಮಹಿಷಮರ್ದಿನಿ, ಸಪ್ತಮಾತೃಕೆಯರು, ಕಾಳಿ, ಲಕ್ಷ್ಮೀ, ಪಾರ್ವತಿ, ಸರಸ್ವತಿ ಇನ್ನು ಮುಂತಾದವರನ್ನು ನೋಡುತ್ತೇವೆ.[೧]

## ಮಾರಮ್ಮ ದೇವಾಲಯ

ಸಂಖ್ಯೆ : ೦೬
ಶಿಲ್ಪ : ಮಾರಮ್ಮನ ಮೂರ್ತಿ
ಸ್ಥಳ : ಗ್ರಾಮದ ಮದ್ಯ
ಅಭಿಮುಖ : ದಕ್ಷಿಣಾಭಿಮುಖ
ಕಾಲ : ೧೯೭೯

ಈ ದೇವಾಲಯವು ಕಾನಾಹೊಸಹಳ್ಳಿ ಗ್ರಾಮದ ಪ್ರಮುಖ ಶಕ್ತಿದೇವತೆಯಾಗಿದ್ದು, ತುಂಬಾ ವಿಶೇಷತೆಯಿಂದ ಆರಾಧ್ಯ ದೇವತೆಯಾಗಿದ್ದಾಳೆ. ಈ ದೇವಾಲಯವು ದಕ್ಷಿಣಾಭಿಮುಖವಾಗಿದ್ದು ದೇವಾಲಯದಲ್ಲಿ ೧೪ ಅರ್ಧಕಂಭ, ೧೦ ಪೂರ್ಣಕಂಭಗಳಿದ್ದು, ಆಧುನಿಕ ಶೈಲಿಯಿಂದ ಕೂಡಿದೆ. ಗರ್ಭಗೃಹವು ಪಶ್ಚಿಮಾಭಿಮುಖವಾಗಿದ್ದು, ಗರ್ಭಗೃಹದ ದ್ವಾರಬಾಗಿಲಿನಲ್ಲಿ ಅಲಂಕೃತಗೊಂಡ ಮಯೂರಗಳ ಚಿತ್ರಗಳಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಶಿಖರವನ್ನು ಸಹ ನಿರ್ಮಾಣಮಾಡಲಾಗಿದೆ.

## ಗ್ರಾಮದೇವತೆಗಳು

ಗ್ರಾಮದೇವತೆಗಳು ನಿರ್ದಿಷ್ಟ ಗ್ರಾಮದಲ್ಲಿ ನೆಲೆಗೊಳ್ಳುವ ವಿಧಾನ ಕುತೂಹಲಕಾರಿಯಾಗಿದೆ. ಇದರ ಪೂರ್ವಸ್ಥಿತಿ ಜನತೆಯ ಸಂಕಷ್ಟದ ಕಾಲ ಎನ್ನಬಹುದು. ಅಥವಾ ಅವರು ದೇವರನ್ನು ಉಪೇಕ್ಷೆಮಾಡಿದ ಸಂದರ್ಭ ಇರಬಹುದು. ಇಲ್ಲವೇ ಬದುಕಲು ದೈವದ ಅಗತ್ಯವನ್ನು ಮನಗಾಣದ ಮಾನಸಿಕ ಹಂತ ಎನ್ನಬಹುದು. ಇಂತಹ ಸಂದರ್ಭದಲ್ಲಿ ಯಾವುದೇ ಒಂದು ಗ್ರಾಮಕ್ಕೆ ದೇವತೆಯ ಪ್ರವೇಶವಾಗುತ್ತದೆ. ಊರಿಗೆ ಈ ದೇವತೆಯರು ಮಾಂತ್ರಿಕ ಆಗಮನ ಎನ್ನಬಹುದು. ಬಹಳ ಸಂದರ್ಭಗಳಲ್ಲಿ ಭಕ್ತರನ್ನು ದೇವತೆಯೇ ಸಂಪರ್ಕಿಸುವುದು ಇಲ್ಲಿನ ಸಾಮಾನ್ಯ ಅಂಶ. ದೇವತೆ ಭಕ್ತರಿಗೆ ನೆರವಾಗುವ ಬಯಕೆಯನ್ನು ವ್ಯಕ್ತಪಡಿಸುತ್ತದೆ. ಆ ಕಾರಣಕ್ಕಾಗಿ ತನ್ನ ಆರಾಧನೆಯನ್ನು ಮಾಡಬೇಕೆಂದು ಕೇಳಿಕೊಳ್ಳುತ್ತದೆ. ಭಕ್ತರು ಇದಕ್ಕೆ ಊಗೊಟ್ಟು ದೇವತೆಯನ್ನು ತಮ್ಮ ಗ್ರಾಮದಲ್ಲಿ ಪ್ರತಿಸ್ಥಾಪನೆ ಮಾಡುತ್ತಾರೆ. ದೇವತೆ ಭಕ್ತರನ್ನು ಕನಸಿನಲ್ಲಿ ಕಂಡು ಮಾತನಾಡಬಹುದು, ಇಲ್ಲವೇ ಆಶ್ಚರ್ಯಕರವಾದ ಸಂದರ್ಭವನ್ನು ಉದ್ದೇಶಕ್ಕಾಗಿಯೇ ಸೃಷ್ಠಿಸಿ ತಿಳುವಳಿಕೆಯನ್ನು ಕೊಡಬಂದಳು. ಈ ಸಂದರ್ಭದಲ್ಲಿ ಕೆಲವು ಪುರಾಣಕಥೆಗಳನ್ನು ಅವಲೋಕಿಸಿಬಹುದು.[೧೩]

## ಮಾರಮ್ಮದೇವಿ

ಕಾನಾಹೊಸಹಳ್ಳಿ ಗ್ರಾಮದ ಪ್ರಸಿದ್ಧ ಗ್ರಾಮದೇವತೆಯಾದ ಮಾರಿಕಾಂಬೆಯು ಈ ಗ್ರಾಮಕ್ಕೆ ಬಂದ ಹಿನ್ನೆಲೆಯನ್ನು ಹೇಳುವುದಾದರೆ ಆಂಧ್ರಪ್ರದೇಶದ ಆದವಾನಿಯಿಂದ ಬಂದವಳೆಂದು ಈ ಮಾರಮ್ಮನ ಬಗ್ಗೆ ಐತಿಹ್ಯವು ಇದೆ. ಈ ಹೋಬಳಿಗೆ ಬರುವ ಹಳ್ಳಿಗಳಿಗೆ ವಿಶೇಷ ಹಬ್ಬವಾಗಿ ಜನಪ್ರಿಯತೆಯನ್ನು ಈ ಮಾರಮ್ಮದೇವಿಯು ಪಡೆದುಕೊಂಡಿದ್ದಾಳೆ. ಸುತ್ತಮುತ್ತಲಿನ ಗ್ರಾಮಗಳಿಗೆ ಕಾನಾಹೊಸಹಳ್ಳಿ ಎಂದರೆ ಮಾರಮ್ಮದೇವಿಯೇ ಮೊದಲು ನೆನಪಾಗುತ್ತಾಳೆ. ಅಲ್ಲದೇ ಸ್ಥಳೀಯ ಹಾಗೂ ಸುತ್ತಮುತ್ತಲಿನ ಗ್ರಾಮದವರಿಗೆ ರೋಗ-ರುಜಿನ ಬಂದರೆ ನಿವಾರಣೆಗಾಗಿ ಹರಕೆ ಹೊತ್ತುಕೊಂಡು ಮೂರು ವರ್ಷ ಅಥವಾ ಐದು ವರ್ಷಕ್ಕೊಮ್ಮೆ ನೆಡೆಯುವ ಜಾತ್ರೆಯಲ್ಲಿ ಹರಕೆಯನ್ನು ತೀರಿಸುತ್ತಿರುವುದು ವಿಶೇಷವಾಗಿದೆ. ಜಾತ್ರೆಯ ಸಂದರ್ಭದಲ್ಲಿ ದೇವಸ್ಥಾನದ ಸುತ್ತಮುತ್ತ ಹಾಗೂ ಊರಿನ ಮುಖ್ಯ ದ್ವಾರ ಬಾಗಿಲುಗಳಲ್ಲಿ ವಿದ್ಯುತ್ ಅಲಂಕಾರಗಳಿಂದ ಹಾಗೂ ತಳಿರು ತೋರಣಗಳಿಂದ ಶೃಂಗರಿಸಲಾಗುತ್ತದೆ. ಅಲ್ಲದೇ ಗ್ರಾಮದಲ್ಲಿ ಆಯಾ ಸಮುದಾಯಕ್ಕೆ ಸೇರಿದ ದೇವತೆಗಳಿಗೆ ಆಯಾ ಸಮುದಾಯದವರು ದೇವಿಯ ಆಚರಣೆಗಳನ್ನು ಮಾಡುವುದು ಗ್ರಾಮದಲ್ಲಿ ಕಂಡು ಬರುತ್ತದೆ

## ಅಡಿ ಟಿಪ್ಪಣಿಗಳು

೧. ಪ್ರಭಾಕರ ಎನ್.ಎಂ, ದೇವಾಲಯ ವಾಸ್ತು ವಿಷಯನುಪೂರ್ವಿ ಟಿಪ್ಪಣಿಗಳು, ಸಂ-೦೬ ಪುಟ೫೨
೨. ಅಪರ್ಣ ಕೊ.ಸ., ದೇವಾಲಯ ವಾಸ್ತುಶಿಲ್ಪ ಪರಿಚಯ, ಪುಟ-೦೧
೩. ಅದೇ, ಪುಟ-೦೩
೪. ಅದೇ, ಪುಟ-೦೮
೫. ಕುಂಬಾ ಸದಾಶಿವಪ್ಪ, ಹಲವು ಹನ್ನೊಂದು ಹರಪನಹಳ್ಳಿ, ಪುಟ-೬೨
೬. ತಿಪ್ಪೇಸ್ವಾಮಿ ಎಚ್, ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪುಟ-೭೫
೭. ಕುಂ.ಬಾ.ಸ., ಪೂರ್ವೋಕ್ತ, ಪುಟ-೬೫
೮. ಸುರೇಶ ಬಿ, ಚಿತ್ರದುರ್ಗ ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪುಟ-೨೨೬
೯. ಕ್ಷೇತ್ರಕಾರ್ಯ ವರದಿ.
೧೦. ಸು ಬಿ, ಪೂರ್ವೋಕ್ತ, ಪುಟ-೨೨೬
೧೧. ರಾಮಚಂದ್ರರಾವ್ ಎಸ್.ಕೆ, ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಪುಟ-೨೭೨-೨೭೫
೧೨. ಸು.ಬಿ., ಪೂರ್ವೋಕ್ತ, ಪುಟ-೨೩೦
೧೩. ಸಿದ್ಧಲಿಂಗಯ್ಯ, ಗ್ರಾಮದೇವತೆಗಳು, ಪುಟ-೧೬

## ಅಧ್ಯಾಯ-ಐದು
## ಕೆರೆ-ಬಾವಿಗಳು

*'Water is the most important substance for the life is tance on earth'* ಅಂದರೆ ಭೂಮಿಯ ಮೇಲೆ ಬದುಕುವ ಬದುಕಿ ತಮ್ಮ ಜೀವ ಉಳಿಸಿಕೊಂಡು ಜೀವನ ಸಾಗಿಸುವ ಪ್ರತಿಯೊಂದು ಜೀವಿಗೂ ನೀರು ಬಹಳ ಮಹತ್ವವಾದುದಾಗಿದೆ.[೧] ಜೀವ ಮೂಲವೇ ಜಲ ಎಂಬ ತಿರುಳ ಸತ್ಯವಾಗಿದೆ. ಒಳ್ಳೆಯ ನೀರಿನ ಸೌಲಭ್ಯಗಳು ಒಳ್ಳೆಯ ಸಮಾಜವನ್ನು ನಿರ್ಮಿಸಬಲ್ಲವು. ಭಾರತ ಕೃಷಿ ಪ್ರಧಾನ ದೇಶ ಇಲ್ಲಿ ಶೇಕಡ ೭೦ ರಷ್ಟು ಜನರು ಕೃಷಿಯನ್ನು ಅವಲಂಬಿಸಿದ್ದಾರೆ. ಬೇಸಾಯ ಕಂಡುಕೊಳ್ಳುವ ಪೂರ್ವದಲ್ಲಿ ಸಂಚಾರಿಯಾಗಿದ್ದ ಆದಿಮಾನವನ ಆಹಾರಕ್ಕಾಗಿ ಪ್ರಾಣಿಗಳನ್ನು ಬೇಟೆಯಾಡುವುದರ ಜೊತೆಗೆ ಸಾಗರ, ಹೊಳೆ, ಹಳ್ಳ, ಹೊಂಡ, ಕೆರೆ ಮುಂತಾದ ಜಲಾಶಯಗಳ ಹತ್ತಿರ ನೆಲೆನಿಂತು ಬಂಡೆಗಲ್ಲಿನ ಆಶ್ರಯಿಸಿ ಜೀವನ ಜಲಾಶ್ರಯ ಸುತ್ತ ಮುತ್ತ ಕಂಡುಕೊಂಡ ನಂತರ ಬದುಕಿಗೆ ಬೇರೆಕ್ರಮ ಬದ್ಧತೆ ಬೆಳೆದು ಬಂತು.

ಪ್ರಕೃತಿಯಲ್ಲಿ ಮಡುಗಟ್ಟಿದ ನೀರನ್ನು ಕಂಡು ಹರಿಯುವ ನೀರಿಗೆ ವಡ್ಡುಕಟ್ಟಿ ತನ್ನ ಅನುಕೂಲಕ್ಕೆ ತಕ್ಕಂತೆ ಬಳಸತೊಡಗಿದ. ಇತಿಹಾಸ ಪೂರ್ವದಲ್ಲಿ ಕೆರೆಗಳನ್ನು ಮೊದಲಿಗೆ ನಿರ್ಮಾಣ ಮಾಡಿದವರು ತಾಮ್ರ ಮತ್ತು ಬೃಹತ್ ಶಿಲಾಯುಗದ ಜನರು. ಇದಕ್ಕೆ ಉದಾಹರಣೆಗೆ ಪುನಾದ ಹತ್ತಿರ ಇನಾಂಗಾವ್‌ದಲ್ಲಿ ತಾಮ್ರಯುಗದ ಜನರು ನಿರ್ಮಿಸಿದ ಕೆರೆ ಪತ್ತೆಯಾಗಿದೆ. ಪುರಾತನ ಕಾಲದಿಂದಲೂ ಈ ದೇಶದಲ್ಲಿ ವಿವಿಧ ಗಾತ್ರದ ಕೆರೆಗಳನ್ನು ನಿರ್ಮಿಸಿ ಅವುಗಳಿಂದ ಭೂಸಾಗುವಳಿ ಮಾಡುತ್ತಲೇ ಬಂದಿದ್ದಾರೆ. ಬೇಸಾಯದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಕೆರೆ, ನೀರಾವರಿ ವ್ಯವಸ್ಥೆಯನ್ನೇ ಅವಲಂಬಿಸಬೇಕಾಯಿತು.

**"ಕೆರೆಯಂ ಕಟ್ಟಿಸು ಬಾವಿಯಂ ಸವೆಸು ದೇವಗಾರಮಂ ಮಾಡಿಸು।**
**ಜ್ಜೆರಿಯೊಳ್ಸಿಲ್ಕಿದನಾಥದಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ।**
**ಗ್ರ್ಗೆರೆವೆಟ್ಟಾಗಿರು ಶಿಷ್ಟರಂ ಪೊರೆಯನುತ್ತಿಯೆಂತೆಲ್ಲವಂ ವಿದಿಂತಾ।**
**ಯೆರೆದಳ್ವಾಲೆರೆವಂದು ತೊಟ್ಟು ಕಿವಿಯೊಳಂ ಲಕ್ಷ್ಮೀಧರಾಮಾತ್ಯನಾ॥"**

ಈ ತರಹದ ಉಲ್ಲೇಖವಾದ ಪದ್ಯವನ್ನು ವಿಜಯ ನಗರದ ಅರಸ ಪ್ರೌಢಪ್ರತಾಪ ದೇವರಾಯನ (ಕ್ರಿ.ಶ.೧೪೮೯-೨೨) ಮಂತ್ರಿ ಲಕ್ಷ್ಮೀಧರನು ಕೂಸಾಗಿದ್ದಾಗ ಅವನ ತಾಯಿ ಹಾಡಿ ಹಾಲೆರೆಯುತ್ತಿದ್ದಳೆಂದು ಹಂಪೆಯ ಕಡಲೆಕಾಳು ಗಣೇಶನ ಗುಡಿಯ ಮುಂದಿನ ಅಗಸೆಯಲ್ಲಿರುವ ಕ್ರಿ.ಶ.೧೪೧೧ ರ ಶಾಸನವು ತಿಳಿಸುತ್ತದೆ.[೨] 'ಕೆರೆ' ಎಂಬ ಎರಡು ಅಕ್ಷರದ ಪದವು ಸಣ್ಣಪ್ರಮಾಣದ ಮಣ್ಣಿನ ಏರಿಯಿಂದ ಕೂಡಿದ ನೀರಿನ ಸಂಗ್ರಹಾರವೇ 'ಕೆರೆ' ಎಂದೆನಿಸಿಕೊಳ್ಳುತ್ತದೆ.[೩] ಈ ಕೆರೆ ನಿರ್ಮಾಣದಲ್ಲಿ ಶಾಸನಗಳು ಇತಿಹಾಸ ಬಿಚ್ಚಿಡುವಂತಹ ಅತ್ಯಂತ ಪ್ರಮುಖ ಪಾತ್ರವಹಿಸಿವೆ. ಕೆರೆ, ಕೊಳ್ಳ, ಕಲ್ಯಾಣಿ, ಸರೋವರ, ಬಾವಿ ಮುಂತಾದ ಜಲಾಶಯಗಳನ್ನು ನಿರ್ಮಿಸುವುದು ಸತ್ಕಾರ್ಯವೆಂದು ನಮ್ಮ ಪೂರ್ವಜರು ನಂಬಿದ್ದರು. ಇದರ ಅನ್ವಯದಂತೆ ಕೂಡ್ಲಿಗಿ ತಾಲ್ಲೂಕಿನಲ್ಲಿ ಒಳಗೊಂಡಿರುವಂತೆ ಕೆರೆ ಬಾವಿಗಳು ನಿರಾಶ್ರಿತ ಪ್ರದೇಶಗಳಾಗಿದ್ದು, ಈ ಅಧ್ಯಯನದ ಕಾಲಮಿತಿಯಲ್ಲಿ ನೋಡುವುದಾದರೆ ಕಾನಾಹೊಸಹಳ್ಳಿ ಗ್ರಾಮದ ಹೊರವಲಯದಲ್ಲಿ ಕೆರೆ ನಿರ್ಮಾಣ ಮಾಡಿರುವುದು ಕಂಡು ಬರುತ್ತದೆ. ಈ ಕೆರೆಯನ್ನು ಅಂದಿನ ಬ್ರಿಟಿಷ್ ಸರ್ಕಾರವು ಇಲ್ಲಿ ನೀರು ವ್ಯರ್ಥವಾಗಿ ಹರಿಯುತ್ತಿರುವುದನ್ನು ಗಮನಿಸಿ ಈ ಹಳ್ಳಕ್ಕೆ ಒಂದು ತಡೆ ಗೋಡೆಯನ್ನು ನಿರ್ಮಿಸುವುದರ ಮೂಲಕ ಈ ಕೆರೆಯನ್ನು ನಿರ್ಮಾಣ ಮಾಡಿದರು. ಇದರಿಂದ ಇಲ್ಲಿನ ಸುತ್ತಮುತ್ತಲಿನ ಭೂ ಪ್ರದೇಶ ನೀರಾವರಿ ಸೌಲಭ್ಯವನ್ನು ಪಡೆದುಕೊಂಡಿತ್ತು. ಈ ರೀತಿಯ ಕೆರೆ ಬಾವಿಗಳು ಪ್ರತಿಯೊಂದು ಗ್ರಾಮದಲ್ಲಿರುವುದನ್ನು ಕಾಣಬಹುದಾಗಿದೆ. ಅದರಲ್ಲಿ ಪ್ರಮುಖವಾಗಿ ಕೂಡ್ಲಿಗಿ ತಾಲ್ಲೂಕಿನಲ್ಲಿ ಅನೇಕ ದೊಡ್ಡ ಕೆರೆಗಳು, ಸಣ್ಣ ಕೆರೆಗಳು

ಇದ್ದು ಇವುಗಳು ಶತಮಾನದಷ್ಟು ಹಿನ್ನೆಲೆಯನ್ನು ಹೊಂದಿವೆ. ಒಂದು ಕೆರೆ ನಿರ್ಮಾಣಕ್ಕೆ ೧೨ ಸೂತ್ರಗಳನ್ನು ಹೇಳಿದೆ ಅವು ಈ ಕೆಳಗಿನಂತೆ ಉಲ್ಲೇಖಿತವಾಗಿದೆ.

೧. ಅರಸ ಆ ಚಂದ್ರರ್ಕವಾಗಿ ಹೆಸರುಗಳಿಸಿಕೊಳ್ಳುವವನಾಗಿ ಅಂತವನು ಕೆರೆ ನಿರ್ಮಿಸಬೇಕು.

೨. ಜಲಶಾಸ್ತ್ರದಲ್ಲಿ ನೈಪುಣ್ಯತೆ ಪಡೆದವನಾಗಿರಬೇಕು.

೩. ಉತ್ತಮ ಜೇಡಿಮಣ್ಣುಳ್ಳ ಕೆರೆ ಅಂಗಳ ಆಯ್ಕೆ ಮತ್ತು ನೀರು ಹಿಂಗುವ ಜಾಗವಾಗಬಾರದು.

೪. ನೀರಿನ ಬುಗ್ಗೆಯು ಕೆರೆಯಿಂದ ಸುಮಾರು ಮೂರು ಯೋಜನೆಯಷ್ಟು ದೂರವಿರಬೇಕು.

೫. ಬೆಟ್ಟಗುಡ್ಡಗಳ ಸಾಲನ್ನು ಕೆರೆ ನಿರ್ಮಿಸಲು ಉಪಯೋಗಿಸಿಕೊಳ್ಳಬೇಕು.

೬. ಗುಡ್ಡಗಳ ನಡುವಿನ ಕಣಿವೆ ಪ್ರದೇಶ ಕೆರೆ ಏರಿ ನಿರ್ಮಿಸಲು ಉಪಯೋಗಿಸಬೇಕು.

೭. ಕೆರೆ ಸಮೀಪದಲ್ಲಿ ಅನುಕೂಲವಾದ ಫಲನೀಡುವ ಜಮೀನು ಇರಬೇಕು.

೮. ಕೆರೆ ನೀರಿನ ಅಂಗಾಳ ವಿಸ್ತಾರವಾಗಿಯೂ ಆಳವಾಗಿಯೂ ಇರಬೇಕು.

೯. ಕೆರೆ ನಿರ್ಮಾಣದ ಸಮೀಪದಲ್ಲಿ ಕೆರೆ ಏರಿಯನ್ನು ನಿರ್ಮಿಸಲು ಕಲ್ಲುಗಳ ರಾಶಿ ಇರಬೇಕು

೧೦. ಕೆರೆ ಸಮೀಪ ಜಮೀನು ಫಲವತ್ತಾಗಿ, ಸಮತಟ್ಟಾಗಿ ಇರಬೇಕು.

೧೧. ಕೆರೆಯ ತೂಬು ನಿಯಂತ್ರಣ ಮತ್ತು ನೀರಿನ ಒತ್ತಡವನ್ನು ತಡೆಯುವ ಸಾಮರ್ಥ್ಯ ಇರಬೇಕು.

೧೨. ಕೆರೆ ನಿರ್ಮಾಣದಲ್ಲಿ ತಂತ್ರಜ್ಞಾನ ತಿಳಿದ ೧೨ ಜನ ನುರಿತ ಅನುಭವಿಗಳಿಂದ ಕೂಡಿದ ತಂಡ ಇರಬೇಕು.[೪]

ಈ ರೀತಿಯಾದ ಕೆರೆಯ ನಿರ್ಮಾಣದ ಪ್ರಮುಖ ಸೂತ್ರಗಳು ಗಮನಸೆಳೆಯುತ್ತವೆ. ಅವು ನಿರ್ಮಾಣದಲ್ಲಿ ವಾಸ್ತವ ಕೂಡ ಆಗಿವೆ. ಕೆರೆ ನಿರ್ಮಾಣದಲ್ಲಿ ನಿರ್ಮಾತೃವಿನ ಕೆಲವು ದೋಷಗಳನ್ನು ಗಮನಿಸಬಹುದು. ಅಂದರೆ ಕೆರೆಯ ರಚನೆ ಕಾರ್ಯದಲ್ಲಿ ಅನುಸರಿಸಬೇಕಾದ ಮುನ್ನೆಚ್ಚರಿಕೆಯ ಕ್ರಮಗಳನ್ನು ತೆಗೆದುಕೊಳ್ಳಬೇಕಾದ ಅವಶ್ಯಕತೆ ಇರುತ್ತದೆ. ಅವುಗಳೆಂದರೆ

೧. ಕೆರೆಯಿಂದ ನೀರು ಸ್ರವಿಸಬಾರದು ಅಥವಾ ಸೋರುವಿಕೆ ಆಗಬಾರದು.

೨. ಕೆರೆಯ ಪಾತ್ರದಲ್ಲಿನ ಮಣ್ಣು ಲವಣಾಂಶದಿಂದ ಕೂಡಿರಬಾರದು.

೩. ಎರಡು ರಾಜ್ಯಗಳ ನಡುವಿನ ಗಡಿಪ್ರದೇಶಗಳನ್ನು ಆಯ್ಕೆ ಮಾಡಬಾರದು.

೪. ಕೆರೆಯ ಅಂಗಳದ ಮಧ್ಯಭಾಗ ಉಬ್ಬಗಿರಬಾರದು.

೫. ಅತ್ಯಲ್ಪ ನೀರು ಬರುವ ಪ್ರದೇಶವಾಗಲಿ, ಅತಿ ಹೆಚ್ಚು ಅಚ್ಚುಕಟ್ಟುಯಿರುವ ಜಾಗವಾಗಲಿ ಯೋಗ್ಯವಲ್ಲ.

೬. ನೀರಾವರಿಯ ಜಮೀನು ಸ್ವಲ್ಪ ಇದ್ದು ಅಧಿಕ ನೀರು ಬರುವಂತಹ ಜಲನಯನ ಪ್ರದೇಶ ಕೂಡ ಯೋಗ್ಯವಲ್ಲ

೭. ಅಲ್ಪ ಪ್ರದೇಶ ಅಧಿಕ ಭೂಮಿಯ ಕೊಡದು.[೫]

ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಕೆರೆಗಳು ರಚನೆಯಾದಂತೆ ಕೂಡ್ಲಿಗಿ ತಾಲ್ಲೂಕಿನ ಕೆಲ ಕೆರೆಗಳು ಈ ಪ್ರಮುಖ ಅಂಶಗಳನ್ನು ಮೈಗೂಡಿಸಿಕೊಂಡು ನಿರ್ಮಾಣವಾಗಿರುವುದು ಕಂಡು ಬರುತ್ತದೆ. ಅದರಲ್ಲಿ ಕೂಡ್ಲಿಗಿ ತಾಲ್ಲೂಕಿನ ಪ್ರಾಚೀನ ಹಿನ್ನೆಲೆ ಹೊಂದಿದ ಅರಣ್ಯ, ಬೆಟ್ಟ, ಗುಡ್ಡಗಳಸಾಲು ಹಾಗೂ ಕೆರೆಗಳ ನಿರ್ಮಾಣಕ್ಕೆ ಯೋಗ್ಯವಾದ ಪ್ರದೇಶವಾಗಿರುವುದರಿಂದ ಹೆಚ್ಚಿನ ಮಳೆಯಾಶ್ರಿತ ಕೆರೆ ನಿರ್ಮಾಣವಾಗಿರುವುದನ್ನು ಹೆಚ್ಚಾಗಿ ನೋಡಬಹುದು. ಕೆರೆಗಳ ರಚನಾ ಕಾರ್ಯದಲ್ಲಿ ಕೆಲವು ಪ್ರಮುಖ ಅಂಶಗಳು ಪ್ರಮುಖ ಪಾತ್ರವಹಿಸುತ್ತವೆ. ಅಂತವುಗಳಲ್ಲಿ ತೂಬು, ಕೋಡಿ, ಮದಗ, ಕಾಲುವೆ ಮುಂತಾದವುಗಳನ್ನು ನೋಡಬಹುದು.

## ಕಾನಾಹೊಸಹಳ್ಳಿ ಕೆರೆ

ಗ್ರಾಮದಲ್ಲಿರುವ ಈ ಕೆರೆಯು ನಿರ್ಮಾಣದ ಬಗ್ಗೆ ಸ್ಥಳಿಯರ ಅಭಿಪ್ರಾಯದಂತೆ ಈ ಪ್ರದೇಶದಲ್ಲಿ ಮಳೆಯನೀರು ಪೋಲಗುತ್ತಿರುವುದನ್ನು ಕಂಡು ಬ್ರಿಟೀಷರು ಈ ಕೆರೆಯನ್ನು ನಿರ್ಮಿಸಿದ್ದಾರೆಂದು ಹೇಳುತ್ತಾರೆ. ಪ್ರಸ್ತುತ ದಿನಗಳಲ್ಲಿ ಕೆರೆಯಲ್ಲಿ ನೀರಿನ ಸುಳಿವು ಇಲ್ಲ ಇದಕ್ಕೆ ಕಾರಣ ಉತ್ತಮವಾದ ಮಳೆಯಿಲ್ಲದಿರುವುದು. ಅಲ್ಲದೇ ಕೆರೆಗೆ ನೀರು ಸರಬರಾಜಗುವ ಹಳ್ಳಗಳಿಗೆ ಅಲ್ಲಲ್ಲಿ ತಡೆಗೋಡೆಗಳನ್ನು (ಚೆಕ್‌ಡ್ಯಾಮ್) ಗಳನ್ನು ನಿರ್ಮಿಸಿರುವುದರಿಂದ ನೀರು ಕೆರೆಗೆ ಬರಲು ಸಾಧ್ಯವಾಗುತ್ತಿಲ್ಲ. ಈ ಕೆರೆಯ ಅಂಗಳದಲ್ಲಿ ಇಟ್ಟಿಗೆ ಬಟ್ಟಿಗಳು ಕಂಡುಬರುತ್ತವೆ. ಅಲ್ಲದೇ ಹೂಳನ್ನು ತೆಗೆದಿರುವ ಗುಂಡಿಗಳು , ದಟ್ಟವಾದ ಕುರುಚಲು ಗಿಡಗಳು ಕಂಡುಬರುತ್ತವೆ. ಕೆರೆಯ ಏರಿಯು ಸ್ಥಳೀಯವಾಗಿ ಸಿಗುವ ಕಲ್ಲುಗಳು, ಮಣ್ಣಿನಿಂದ ಎತ್ತರವಾಗಿ ನಿರ್ಮಿಸಲಾಗಿದೆ. ಕೆರೆಯ ತುಬೂ ೩ ಅಡಿ ಅಳತೆಯ ವೃತ್ತಾಕಾರವಾಗಿ ನಿರ್ಮಿಸಿ ಕಬ್ಬಿಣದ ತೂಬನ್ನು ಹಾಕಲಾಗಿದೆ. ಈ ತೂಬಿನ ಮೂಲಕ ಅಂದಿನ ದಿನಗಳಲ್ಲಿ ನೀರನ್ನು ಕೃಷಿಗೆ ಬಳಸುತ್ತಿದ್ದದ್ದು ಕಂಡುಬರುತ್ತದೆ. ಈ ತೂಬಿನ ಮುಂಭಾಗದಲ್ಲಿ ಎರಡು ಕಲ್ಲಿನ ಕಂಬಗಳನ್ನು ನಿರ್ಮಿಸಿದ್ದಾರೆ, ಈ ಕಲ್ಲುಗಳ ಸಹಾಯದಿಂದ ತೂಬನ್ನು ಎತ್ತುವುದು ಇಳಿಸುವುದು ಮಾಡುತ್ತಾರೆ. ಅಲ್ಲದೆ ಕೆರೆಯ ಹಿಂಬಾಗದಲ್ಲಿ ಮಾಗಣಿ ಮಾಡಿದ ಕುರುಹುಗಳಾಗಿ ನೀರಿನ ಕಾಲುವೆಗಳು ಕಂಡುಬರುತ್ತವೆ. ಈ ಕಾಲುವೆಗಳ ಮೂಲಕ ಅಂದಿನ ಕಾಲದಲ್ಲಿ ಕೃಷಿಗೆ ನೀರನ್ನು ಬಳಸಿಕೂಳ್ಳಲಾಗುತಿತ್ತು. ಕೆರೆಯ ಹಿಂಬಾಗದಲ್ಲಿ ಬಸವಣ್ಣನ ದೇವಾಲಯವು ಸಹ ಕಂಡುಬಂದಿದೆ.

## ತೂಬು

ತೂಬುಗಳಿಲ್ಲದೇ ಕೆರೆಯ ಕಾರ್ಯ ಅಸಾಧ್ಯ. ಕೆರೆಯ ಒಂದು ಅವಿಭಾಜ್ಯ ಅಂಗ ತೂಬುಗಳು. ಕೆರೆಯ ನೀರನ್ನು ಹೊರಗೆ ಹೋಗದಂತೆ ತಡೆಹಿಡಿದಿಡುವ ಸಾಧನಗಳು ಈ ತೂಬುಗಳು. ಈ ತೂಬುಗಳನ್ನು ಸಾಮಾನ್ಯವಾಗಿ ಕಲ್ಲಿನಿಂದ ರಚಿಸಿದ್ದು ಎರಡು ಅಥವಾ ನಾಲ್ಕು ಕಂಬಗಳಿಂದ ಕೂಡಿರುತ್ತವೆ. ಕೂಡ್ಲಿಗಿ ತಾಲ್ಲೂಕಿನ ಎಲ್ಲಾ ಕೆರೆಗಳು ಎರಡು ಕಂಬಗಳಿಂದ ಕೂಡಿರುವುದೇ ಹೆಚ್ಚು. ಈ ತೂಬು ಎರಡು ಕಂಬಗಳ ನಡುವಿನಲ್ಲಿ ಒಂದು ಅಡ್ಡಗಲ್ಲನ್ನು ಹಾಸಲಾಗುತ್ತದೆ. ಇದರ ಮೂಲಕವಾಗಿ ರಂಧ್ರದ ಅಳತೆಗೆ ತಕ್ಕವ್ಯಾಸವುಳ್ಳ ಮರದ ತುಂಡನ್ನು ಇಟ್ಟು ರಂಧ್ರವನ್ನು ಮುಚ್ಚಲಾಗುತ್ತದೆ. ಬೇಕಾದ ರೀತಿಯಲ್ಲಿ ನೀರನ್ನು ಬಳಕೆ ಮಾಡಿಕೊಳ್ಳಲಾಗುತ್ತದೆ.[೬] ಇದೇ ಮಾದರಿಯ ಆಧುನಿಕ ಲೋಹ ಬಳಸಿ ಕೆಲವು ನಿರ್ಮಾಣ ಮಾಡಿರುವುದು ಇದೇ ಕಲೆ ಸಿದ್ಧಾಂತ ಕಾರ್ಯದಲ್ಲಿ ಕೂಡ್ಲಿಗಿ ತಾಲ್ಲೂಕಿನ ಕೆರೆಗಳು ವಿಶೇಷತೆಯನ್ನು ಹೊಂದಿವೆ. ಆದರೆ ಕಾನಾಹೊಸಹಳ್ಳಿಯಲ್ಲಿರುವ ಕೆರೆಯು ಬ್ರಿಟಿಷ್‌ರ ಕಾಲದಲ್ಲಿ ನಿರ್ಮಾಣವಾಗಿರುವುದು ಕಂಡು ಬರುತ್ತದೆ. ಈ ಕೆರೆಯು ತೂಬು, ಕಾಲುವೆ, ಕೋಡಿಗಳಿಂದ ಕೂಡಿದೆ. ತಾಲ್ಲೂಕಿನ ಕೊಟ್ಟೂರು ಕೆರೆಯು ಪ್ರಾಚಿನ ಇತಿಹಾಸದೊಂದಿಗೆ ಹೆಚ್ಚು ನೀರಿನ ಸಂಗ್ರಹದ ಕೆರೆಯಾಗಿ ತೂಬು, ಕಾಲುವೆ, ಕೋಡಿಗಳನ್ನು ಒಳಗೊಂಡಿದೆ. ಇನ್ನು ಹನಸಿ ಕೆರೆಯು ಬಳ್ಳಾರಿ ಜಿಲ್ಲೆಯಲ್ಲಿ ಎರಡನೇ ಅತಿ ದೊಡ್ಡ ಕೆರೆ (ಮೊದಲನೆಯದು ದರೋಜಿ ಕೆರೆ ಸಂಡೂರು ತಾಲ್ಲೂಕು) ಎಂದು ಕರೆಸಿಕೊಂಡಿದೆ. ಒಮ್ಮೆ ಈ ಕೆರೆಯು ತುಂಬಿದರೆ ಮೂರು ವರ್ಷಗಳ ಕಾಲ ನೀರು ಸರಿಯುವುದಿಲ್ಲ ಎಂಬ ಮಾತಿದೆ. ಆದರೆ ಈ ಸ್ಥಿತಿ ಇಂದಿನ ದಿನಮಾನಗಳಲ್ಲಿ ಕಾಣಸಿಗುವುದಿಲ್ಲ ಕಾರಣ ಮಳೆಯಕೊರತೆ ಇರುವುದರಿಂದ.

## ಕೋಡಿ

ಕೋಡಿಯು ಬಹಳ ಮುಖ್ಯವಾದ ಕೆರೆಯ ಭಾಗಗಳಲ್ಲೊಂದು. ಅತಿ ಹೆಚ್ಚು ನೀರು ಬಂದಾಗ ಕೆರೆ ಏರಿಗೆ ಒತ್ತಡ ಬೀಳುತ್ತದೆ. ಆ ಒತ್ತಡವನ್ನು ತಡೆಯಲು ಕೋಡಿಗಳನ್ನು ಅಳವಡಿಸಲಾಗುತ್ತದೆ. ಒಂದು ಕೆರೆಯ ಕೋಡಿ ಬಿತ್ತು ಅಂದರೆ ಆ ಕೆರೆಗೆ ಗರಿಷ್ಠ ಮಟ್ಟದ ನೀರು ಬಂದಿದೆ ಎಂದು ಅರ್ಥ.[೭] ಈ ತರಹದ ಕೋಡಿಗಳು ಕೂಡ್ಲಿಗಿ ತಾಲ್ಲೂಕಿನಲ್ಲಿ ಬಹುತೇಕ ಕೆರೆಗಳಲ್ಲಿ ಕಂಡು ಬರುತ್ತದೆ. ಆದ್ದರಿಂದ ಕೆರೆ ನಿರ್ಮಾಣದಲ್ಲಿ ಕೋಡಿಯ ಪಾತ್ರ ಅತಿ ಮುಖ್ಯವಾದುದಾಗಿದೆ.

## ಕೆರೆ ಏರಿ ನಿರ್ಮಾಣ

ಏರಿಯು ಕೆರೆಯ ಒಂದು ಪ್ರಮುಖ ಅಂಗ. ಕೆರೆಗಳ ಏರಿ ಬಹುತೇಕ ಮಣ್ಣಿನಿಂದ ರಚನೆಗೊಂಡಿರುತ್ತದೆ. ಕೆರೆಯ ಬುನಾದಿ ಈ ಏರಿ ಮಣ್ಣನ್ನು ಹಾಕಿ ನೀರಿನಿಂದ ನೆನಸಿ ಗಟ್ಟಿಮಾಡಿ ಅದರ ಮೇಲೆ ಏರಿಯನ್ನು ಹಂತ ಹಂತವಾಗಿ ನಿರ್ಮಿಸಲು ಮಣ್ಣನ್ನು ಹೊಂದಿಸಿರುತ್ತಾರೆ. ಹೀಗೆ ಮಾಡುವುದರಿಂದ ಏರಿ ಬಲಗೊಳ್ಳುತ್ತದೆ. ಕೆರೆ ಏರಿಯ ಅಡಿಪಾಯ ವಿಶಾಲವಾಗಿದ್ದು, ಅದು ಮೇಲಕ್ಕೆ ಹೋದಂತೆ ಕಿರಿದಾಗುತ್ತ ಹೋಗಿರುತ್ತದೆ. ಕೆರೆಏರಿಯು ನೀರಿನ ಭಾಗಕ್ಕೆ ಸಾಮಾನ್ಯವಾಗಿ ಕಲ್ಲಿನ ಜೋಡನೆಯನ್ನು ಹೊಂದಿಸಿರುತ್ತಾರೆ. ಇದಕ್ಕೆ ಕಟ್ಟುವಾಡ ಅಥವಾ ಕಟ್ಟಡವಾಡ ಎಂದು ಕರೆಯುತ್ತಾರೆ. ಕಲ್ಲಿನ ಜೋಡನೆಯು ಸರಿಯಾಗಿದ್ದರೆ ಏರಿಗೆ ಆಗುವ ಆಪಾಯ ಮತ್ತು ಮಣ್ಣು ಕೊರೆಯುವ ಕುಸಿಯುವ ಸಮಸ್ಯೆ ತಡೆಯಬಹುದು. ಹಾಗೇ ಏರಿಯ ಎರಡು ಭಾಗದ ಇಳಿಜಾರು ನೀರಿನ ಒತ್ತಡ ತಡೆದು ಏರಿಗೆ ಬಲ ನೀಡುವಲ್ಲಿ ಸಹಾಯವಾಗಿರುತ್ತದೆ. ಕೆರೆಯ ಏರಿಯು ಅಂಕುಡೊಂಕಾಗಿ ಕಟ್ಟಿರುತ್ತಾರೆ. ಕಾರಣ ನೀರಿನಿಂದ ಏರಿಗೆ ಬೀಳುವ ಒತ್ತಡವೂ ಸಮನಾಗಿ ಹಂಚಿಕೆಯಾಗುತ್ತದೆ. ಅಕಸ್ಮಾತ್ ಏರಿ ಹೊಡೆದರೆ ಸುಲಭವಾಗಿ ಸರಿಪಡಿಸಲು ಸಹಾಯಕವಾಗಿದೆ. ಏರಿಮೇಲೆ ಒಂದು ವಾಹನ ಚಲಿಸುವಷ್ಟು ರಸ್ತೆಗೆ ಅವಕಾಶ ಮಾಡಿಕೊಡಲಾಗಿರುತ್ತದೆ. ಇದು ಸಂಚಾರಕ್ಕೆ ಅನುವು ಮಾಡಿಕೊಡುತ್ತದೆ.[೮]

ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಇದರ ಅನ್ವಯದಂತೆ ಕೂಡ್ಲಿಗಿ ತಾಲ್ಲೂಕಿನ ಕೆರೆಗಳು ಈ ಮೇಲ್ಕಂಡ ಅಂಶಗಳಿಂದ ನಿರ್ಮಾಣವಾಗಿವೆ ಎಂಬುದು ತಿಳಿದು ಬರುತ್ತದೆ. ಕಾನಾಹೊಸಹಳ್ಳಿ ಒಳಗೊಂಡಂತೆ ಕೆಲವು ಕೆರೆಗಳು ಗ್ರಾಮದ ಕೆರೆ, ಬಾವಿಗಳು ಆಯಾ ಭೌಗೋಳಿಕ ಪರಿಸರಕ್ಕೆ ಅನುಗುಣವಾಗಿ ನಿರ್ಮಾಣವಾಗಿರುವುದು ಅವುಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಕೆಲವು ಕೆರೆಗಳಿಗೆ ಒಂದು ತೂಬು ಹೊಂದಿದ್ದರೆ ಇನ್ನು ಕೆಲವು ಕೆರೆಗಳಿಗೆ ಎರಡು ತೂಬುಗಳನ್ನು ಹೊಂದಿರುತ್ತವೆ. ಕೆರೆಗಳ ಮಾಹಿತಿ ಆಧಾರದಲ್ಲಿ ಕೂಡ್ಲಿಗಿ ತಾಲೂಕಿನ ಹೋಬಳಿಗಳನ್ನು ಗಮನಿಸಿದಾಗ ೧೮೦೭ ರಲ್ಲಿ ಥಾಮಸ್ ಮನ್ರೋ ನಡೆಸಿದ ಸರ್ವೇಕ್ಷೆಯ ಪ್ರಕಾರ ತಾಲ್ಲೂಕುಗಳು ಬೇಸಾಯದಲ್ಲಿದ್ದು, ಭೂಮಿ ೯೨೧.೦೬೮ ಎಕರೆಗಳು ನೀರಾವರಿ ಪ್ರದೇಶ ೪೧.೮೧೫ ಎಕರೆ ಎನ್ನಲಾಗುತ್ತದೆ. ೧೮೭೦ ರಲ್ಲಿ ೨೦೦ಕ್ಕೂ ಹೆಚ್ಚು ಎಕರೆ ನೀರಾವರಿ ಇದ್ದ ಕೆರೆಯಲ್ಲಿ ಕೇವಲ ೧೫ ಎಂದು ತಿಳಿದು ಬರುತ್ತದೆ. ಒಟ್ಟಾರೆಯಾಗಿ ಕೂಡ್ಲಿಗಿ ತಾಲೂಕನ್ನು ಒಳಗೊಂಡಂತೆ ಕೆರೆಗಳ ಅಧ್ಯಯನದ ದೃಷ್ಟಿಯಿಂದ ನೋಡಿದಾಗ ಮನ್ರೋ ಹೇಳುವ ಪ್ರಕಾರ ಕೂಡ್ಲಿಗಿ, ಕೊಟ್ಟೂರು ಕೆರೆಗಳು ಶತಮಾನಗಳಷ್ಟು ಹಿಂದಿನವು ಎಂಬುದು ಅವರ ಮಾಹಿತಿ ಮೂಲಕ ತಿಳಿದು ಬರುತ್ತದೆ.[೯]

### ಬಾವಿಗಳು

### ಬಾವಿಗಳ ನಿರ್ಮಾಣದ ಹಿನ್ನೆಲೆ

ಭೂಮಿಯ ಮೇಲೆ ವಾಸಿಸುವ ಜೀವಿಗಳಿಗೆ ಉಸಿರಾಡಲೂ ಗಾಳಿ, ನೀರು ಎಷ್ಟು ಮುಖ್ಯವೋ, ನೀರು ಅಷ್ಟೇ ಮುಖ್ಯವಾದ ವಸ್ತುವಾಗಿದೆ. ಪುರಾಣದ ಪ್ರಕಾರ ಭಗೀರಥ ಗಂಗೆಯನ್ನು ಭೂಮಿಗೆ ಕರೆತಂದ ನಂತರ ಗಂಗೆ ಅನೇಕ ನಿಧಿಗಳಾಗಿ ಉದ್ದಗಲಕ್ಕೂ ಹರಿದಳು. ನೈಸರ್ಗಿಕವಾಗಿ ಮಾನ್ಸುನ್‌ಗಳಿಂದ ಮಳೆಬಂದು ನದಿ, ಬಾವಿ, ಕೆರೆ, ಕಟ್ಟೆಗಳಲ್ಲಿ ನೀರು ಸಂಗ್ರಹವಾಗಿ ಜನರ ದೈನಂದಿನ ಅವಶ್ಯಕತೆಗಳನ್ನು ಪೂರೈಸುತ್ತಿದ್ದಾಳೆ. ಆದರೆ ಜನಸಂಖ್ಯೆ ಹೆಚ್ಚಿದಂತೆಲ್ಲಾ ಈ ನೀರು ಸಾಕಗದಾಗಿ ಜನರು ಬಾವಿ, ಕೆರೆಗಳನ್ನು ಕಟ್ಟಿಸುವ ಪದ್ಧತಿ ಸಾವಿರಾರು ವರ್ಷಗಳಿಂದ ಪ್ರಾರಂಭವಾಗಿದೆ. ಅನ್ನದಾನ, ವಸ್ತ್ರದಾನಗಳಷ್ಟೇ ಜಲದಾನವು ಪುಣ್ಯ ದೊರೆಕಿಸಿಕೊಡುವ ಮೂಲವೆಂದೂ ತಿಳಿದು ದೇಶವನ್ನು ಆಳಿದ ಅನೇಕ ಅರಸರು, ಅಧಿಕಾರಿಗಳು ಮತ್ತು ಸಾಮಾನ್ಯಜನರು ಪ್ರಾಚೀನ ಕಾಲದಿಂದಲೂ ಬಾವಿಗಳನ್ನು ಕಟ್ಟಿಸುವ ಈ ಕಾರ್ಯಕೈಗೊಂಡಿದ್ದಾರೆ. ಮೌರ್ಯಚಕ್ರವರ್ತಿ ಅಶೋಕ ಕಾಲದಿಂದ ಪ್ರಾರಂಭವಾದ ಈ ಕಾರ್ಯ ಆಧುನಿಕ ಯುಗದವರೆಗೂ ಮುಂದುವರೆದುಕೊಂಡು ಬಂದಿರುವುದು ಆಯಾ ಕಾಲದ ಶಾಸನಗಳಿಂದ ತಿಳಿಯುತ್ತದೆ.

ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಕಾರಣಗಳು ಬಾವಿಗಳನ್ನು ಕಟ್ಟಿಸುವುದಕ್ಕೆ ಕಾರಣವಾಗಿವೆ. ಪ್ರಾವಾಸಿಗರು ವಿಶ್ರಾಂತಿಪಡೆಯಲು ರಸ್ತೆಬದಿಗಳಲ್ಲಿ ಅಲ್ಲಲ್ಲಿ ಬಾವಿ, ವಿಶ್ರಾಂತಿ ಗೃಹಗಳನ್ನು ಕಟ್ಟಿಸಿ ತೋಟಗಳನ್ನು ಬೆಳಸಿದ ಉದಾಹರಣೆಗಳು ಅನೇಕ ಶಾಸನಗಳಲ್ಲಿ ದೊರೆಯುತ್ತವೆ. ಇದು ಆಳರಸರ ಒಂದು ಸಾಮಾಜಿಕ ಹೊಣೆಯಾಗಿದ್ದಷ್ಟೇ ಅಲ್ಲದೇ ಜನರ ಪ್ರೀತಿಗಳಿಸುವ ಮಾರ್ಗವು ಆಗಿತ್ತು. ರಾಜ್ಯದ ಆರ್ಥಿಕ ಪರಿಸ್ಥಿತಿ ಸುಧಾರಿಸಬೇಕಾದರೆ ಬೆಳೆಗಳು ಚೆನ್ನಾಗಿ ಬೆಳೆಯಬೇಕು. ಆ ಬೆಳೆಗಳು ಚನ್ನಾಗಿ ಬೆಳೆಯಲು ಅವಶ್ಯಕವಾದ ನೀರನ್ನು ಒದಗಿಸುವುದು ಅರಸರ ಕರ್ತವ್ಯವಾಗಿತ್ತು. ಆ ಕಾರಣದಿಂದಲೂ ಬಾವಿಗಳ ನಿರ್ಮಾಣ ಪ್ರಾರಂಭವಾಯಿತು. ಇನ್ನು ತಂದೆ ತಾಯಿಗಳಿಗೆ ಪುಣ್ಯ ದೊರೆಯಲೆಂದು ಮಕ್ಕಳು ಅಥವಾ ಮಕ್ಕಳಿಗೆ ಪುಣ್ಯದೊರೆಯಲೆಂದು ತಂದೆ ತಾಯಿಗಳು ಹೇಗೆ ದೇವಸ್ಥಾನಗಳನ್ನು ಕಟ್ಟಿಸುತ್ತಿದ್ದರೋ ಅದೇ ರೀತಿ ಬಾವಿಗಳನ್ನು ಕಟ್ಟಿಸುವ ಪದ್ಧತಿ ಪ್ರಾರಂಭವಾಯಿತು. ಈ ಎಲ್ಲ ಕಾರಣಗಳಿಂದ ಪ್ರಾರಂಭವಾದ ಬಾವಿಗಳ ನಿರ್ಮಾಣವು ಕೇವಲ ನೀರೊದಗಿಸುವ ವೃತ್ತಾಕಾರವಾದ ಅಥವಾ ಚೌಕಾಕಾರವಾದ ಬಾವಿಗಳ ನಿರ್ಮಾಣಕಷ್ಟೇ ಸೀಮಿತವಾಗದೇ ಅದು ಆಕರ್ಷಕವಾಗಿ ಕಾಣಲೆಂದು ಬಾವಿಗಳನ್ನು ಅಲಂಕಾರವಾಗಿ ಕಟ್ಟಲು ಪ್ರಾರಂಬಿಸಿದರು.

### ಬಾವಿ ನೀರಿನ ಉಪಯೋಗದ ಸಾಧನಗಳು

ಬಾವಿ ನೀರಿನ ಉಪಯೋಗದಲ್ಲಿ ಮಾನವನು ಅನುಸರಿಸಿಕೊಂಡು ಬಂದ ವಿವಿಧ ಪದ್ಧತಿಯ ಕ್ರಮಗಳನ್ನು ಈ ಕೆಳಗಿನಂತೆ ವಿವಿಧ ಬಗೆಯ ಪ್ರಗತಿಯ ಹಂತದ ಬದಲಾವಣೆಯ ಹಲವಾರು ಮುಖಗಳಲ್ಲಿ ಕಾಣಬಹುದು. ಮಾನವನ ಬಯಕೆಗಳು ಹಾಗೂ ಅವಶ್ಯಕತೆಗಳು ಹಲವಾರು ಬಗೆಯಲ್ಲಿ ಕಂಡುಬಂದರೂ ಅದರಲ್ಲಿ ಅವನ ಮೊದಲ ಆದ್ಯತೆ ನೀರು ಮತ್ತು ಆಹಾರ. ಪ್ರಕೃತಿಯು ಮನುಷ್ಯನಿಗೆ ನೀರನ್ನು ಯಥೇಚ್ಚವಾಗಿ ಕೊಟ್ಟಿದ್ದರೂ ಕೂಡ ಕೆಲವು ಪ್ರದೇಶಗಳಲ್ಲಿ ಮಾತ್ರ ನೀರಿನ ಅಭಾವ ಉಂಟಾದಂತೆ ಕಂಡುಬಂದ ಪರಿಣಾಮ ನೀರಿನ ಕೊರತೆಯನ್ನು ಅನುಭವಿಸುತ್ತಿರುವ ವಿವಿಧ ಪ್ರದೇಶಗಳಲ್ಲಿ ವಾಸವಾಗಿರುವ ಜನರು ನೀರನ್ನು ಪಡೆಯುವುದಕ್ಕೋಸ್ಕರ ತಗ್ಗಾದ ಪ್ರದೇಶಗಳನ್ನು

ನಿರ್ಮಿಸಿಕೊಂಡು ಅಲ್ಲಿ ಸಂಗ್ರಹವಾದ ನೀರನ್ನು ಮುಂದಿನ ಕೆಲವು ದಿನಗಳವರೆಗೆ ಸಂಗ್ರಹಿಸಿಕೊಳ್ಳುವ ಉದ್ದೇಶದಿಂದ ವಿವಿಧ ಪ್ರಕಾರದ ತಗ್ಗಾದ ಪ್ರದೇಶಗಳ ನಿರ್ಮಾಣದ ವಿವಿಧ ಹಂತಗಳ ಬೆಳವಣಿಗೆಯೇ ಬಾವಿ ರೂಪದಲ್ಲಿ ನಿರ್ಮಾಣಗೊಂಡು ಮನುಷ್ಯನ ಆರೋಗ್ಯ, ಅಹಾರದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರ ವಹಿಸುತ್ತಾ ಬಂದಿವೆ. ಅವುಗಳನ್ನು ನಾವು ಈ ಕೆಳಗಿನಂತೆ ಕಾಣಬಹುದು.

### ೧. ತಗ್ಗಾದ ಪ್ರದೇಶದಲ್ಲಿ ನೀರಿನ ಸಂಗ್ರಹ

ಮಾನವನು ನೀರಿನ ಕೊರತೆಯನ್ನು ಅರಿತ ನಂತರ ನೀರಿನ ಪ್ರಾಮುಖ್ಯತೆ ತಿಳಿದುಕೊಂಡು ನೀರನ್ನು ಬಹಳ ದಿನಗಳವರೆಗೆ ಸಂಗ್ರಹಿಸುವ ಸಾಧನವಾಗಿ ಅವನು ಸಮತಟ್ಟಾದ ಭೂಮಿಯ ಪ್ರದೇಶದಲ್ಲಿ ನೆಲವನ್ನು ಅಗೆದು ತಗ್ಗಾದ ಪ್ರದೇಶವನ್ನ ನಿರ್ಮಾಣಮಾಡಿ ಅದರಲ್ಲಿ ನೀರನ್ನು ಸಂಗ್ರಹಿಸತೊಡಗಿದ. ಆದರೆ ಈ ತಗ್ಗಾದ ಪ್ರದೇಶದಲ್ಲಿ ಸಂಗ್ರಹವಾದ ನೀರು ಬಹಳ ದಿನಗಳವರೆಗೆ ರಕ್ಷಣೆ ಮಾಡಿಟ್ಟುಕೊಳ್ಳಲು ಸಾಧ್ಯವಾಗದಿದ್ದಾಗ ಹಾಗೂ ತ್ಯಾಜ್ಯ ವಸ್ತುಗಳು ಸಂಗ್ರಹವಾದ ನೀರಿನಲ್ಲಿ ಮಲಿನಗೊಂಡು ಆ ನೀರಿನ ಉಪಯೋಗ ಅಸಾಧ್ಯವಾದಗ ಮುಂದಿನ ಹಂತದ ಬೆಳವಣಿಗೆಯಲ್ಲಿ ಕಲ್ಲಿನ ಕಟ್ಟಡರೂಪದಲ್ಲಿ ಜನ್ಮ ತಳೆದು ಬಾವಿಗಳ ರೂಪದಲ್ಲಿ ಕಂಡುಬಂದವು.

### ೨. ಕಪ್ಪಿ ಅಥವಾ ಗಡಗಡೆ

ಭೂಮಿಯ ಸಮತಟ್ಟತೆಯಿಂದ ಸುಮಾರು ೩೦ ರಿಂದ ೫೦ ಅಡಿ ಆಳದವರೆಗೆ ಭೂಮಿಯ ಮಣ್ಣನ್ನು ಅಗೆದು ಅದರಲ್ಲಿ ಸಂಗ್ರಹವಾದ ನೀರನ್ನು ಉಪಯೋಗಿಸಲು ಅನುಕೂಲವಾಗುವಂತೆ ಬಾವಿಯ ಅಂಚಿನ ಗೋಡೆಗಳ ಮೇಲೆ ಎರಡು ಕಲ್ಲಿನ ಕಂಬಗಳನ್ನು ನಿರ್ಮಿಸಿ, ಅವುಗಳ ತಲೆಯ ಮೇಲೆ ಮಟ್ಟವಾಗಿ ಒಂದು ತೊಲೆಯನ್ನು ಎಳೆಯುತ್ತಾರೆ. ಈ ತೊಲೆಯು ದಪ್ಪವಾದ ಕಟ್ಟಿಗೆ ಅಥವಾ ಕಲ್ಲುಬಂಡೆಯದ್ದಾಗಿರಬಹುದು. ಅದರ ಕೆಳ ಭಾಗದಲ್ಲಿ ಕಪ್ಪಿಯನ್ನು ಭದ್ರಮಾಡಿ ಅದರ ತುದಿಗೆ ನೀರು ಸೇದುವ ಹಗ್ಗವನ್ನು ಸೇರಿಸಿ ಆ ಹಗ್ಗಕ್ಕೆ ಕೊಡವನ್ನು ಕಟ್ಟಿ ಬಾವಿಯ ಆಳಕ್ಕೆ ಇಳಿಬಿಟ್ಟು ಕೊಡತುಂಬಿದ ನಂತರ ಹಗ್ಗದ ಸಹಾಯದಿಂದ ಮೇಲಕ್ಕೆತ್ತಿ ನೀರನ್ನು ಪಡೆಯುತ್ತಾರೆ.

### ೩. ಗಾಲಿ (ಚಕ್ರ)

ಈಗಾಗಲೆ ನಿರ್ಮಾಣವಾದ ಬಾವಿಯ ಸಮತಟ್ಟಾದ ಭೂ ಪ್ರದೇಶದ ಸ್ಥಳದಲ್ಲಿ ಕಲ್ಲುಗಾರೆ ಮಣ್ಣಿನಿಂದ ಬಾವಿಯ ಮೇಲ್ಭಾಗದಲ್ಲಿ ಸುಮಾರು ೪ ರಿಂದ ೫ ಅಡಿ ಉದ್ದದಲ್ಲಿ ಎರಡು ಸಣ್ಣ ಪ್ರಮಾಣದಲ್ಲಿ ಗೋಡೆಗಳನ್ನು ನಿರ್ಮಾಣಮಾಡಿ, ಆ ಎರಡು ಗೋಡೆಗಳ ಮೇಲೆ ಕಬ್ಬಿಣದ ಅಥವಾ ಮರದ ದಿಣ್ಣೆಯನ್ನು ಹಾಕಿ ಅದರ ಮೇಲೆ ಗಾಲಿ ಅಥವಾ ಚಕ್ರವನ್ನು ಅಳವಡಿಸಿ, ಅದರ ಮೂಲಕ ಹಗ್ಗವನ್ನು ಬಿಂದಿಗೆಗೆ ಕಟ್ಟಿ ನೀರನ್ನು ಮೇಲೆಕ್ಕೆತ್ತುವ ಸಾಧನವಾಗಿದೆ.

### ೪. ತೂಗಾಡುವ ಬುಟ್ಟಿ

ಭೂಮಿಯ ಸಮ ಪ್ರಮಾಣದ ಮೇಲ್ಭಾಗದಲ್ಲಿ ಬಾವಿಯ ಎರಡು ಬದಿಯಲ್ಲಿ ಕಬ್ಬಿಣದ ದಪ್ಪವಾದ ಸಲಾಕೆಗಳಿಂದ ಅಥವಾ ಕಟ್ಟಡಗಳಿಂದ ಸುಮಾರು ನಾಲ್ಕು-ಐದು ಅಡಿ ಎತ್ತರದಲ್ಲಿ ನೀರನ್ನು ಮೇಲಕ್ಕೆತ್ತುವುದಕ್ಕೆ ಅಗತ್ಯವಾಗುವಂತೆ ಕಟ್ಟಡ ನಿರ್ಮಾಣ ಮಾಡುತ್ತಾರೆ. ಆ ಕಟ್ಟಡದ ಮಧ್ಯದಲ್ಲಿ ನೀರನ್ನು

ಮೇಲಕ್ಕೆತ್ತಲು ಅನುಕೂಲವಾಗುವಂತೆ ಎರಡು ಅಗಲವಾದ ರಂಧ್ರಗಳನ್ನು ಕೊರೆದು, ಅದರಲ್ಲಿ ಹಗ್ಗವನ್ನು ಹಾಕಿ ಆ ಹಗ್ಗಕ್ಕೆ ಬುಟ್ಟಿಯನ್ನು ಕಟ್ಟಿ ಅದರ ಮೂಲಕ ನೀರನ್ನು ಮೇಲಕ್ಕೆತ್ತುವ ಸಾಧನವಾಗಿದೆ.

## ೫. ಏತ ಅಥವಾ ಪಿಕೋಟ

ಭೂಮಿಯ ಮೇಲ್ಭಾಗದಿಂದ ಸುಮಾರು ಮುವತ್ತು ಅಡಿ ಆಳಕ್ಕೆ ಭೂಮಿಯನ್ನು ಅಗೆದು ಸುಮಾರು ೨೦-೩೦ ಸುತ್ತಳತೆಯ ಅಗಲವಾದ ಬಾವಿಯನ್ನು ನಿರ್ಮಿಸಿ, ಬಾವಿಯ ದಡದಲ್ಲಿ ಉದ್ದವಾದ ಮರದ ಕಂಬವನ್ನು ನೆಟ್ಟು, ಅದರ ಮೇಲ್ಭಾಗದ ತುದಿಗೆ ಇನ್ನೊಂದು ಮರದ ತೊಲೆಯು ಮೇಲಕ್ಕೂ-ಕೆಳಕ್ಕೂ ಆಡುವ ಹಾಗೆ ಕಬ್ಬಿಣದ ಉದ್ದವಾದ ಮೊಳೆಗಳಿಂದ ಹೊಂದಿಸಿರುತ್ತಾರೆ. ಈ ತೊಲೆಯು ಒಂದು ಕಡೆ ಉದ್ದವಾಗಿಯು ಎದುರುಗಡೆ ಕಿರುದಾಗಿಯು ಹೊಂದಿಸುತ್ತಾರೆ. ಉದ್ದವಾಗಿರುವ ತುದಿಗೆ ನೀರಿನ ಬಕೆಟ್ಟನ್ನು ಕಟ್ಟಿರುತ್ತಾರೆ. ಇದನ್ನು ಕಬ್ಬಿಣದಿಂದಲೂ, ಚರ್ಮದಿಂದಲೂ, ಬಿದಿರಿನಿಂದಲೂ, ಮಾಡಬಹುದು. ತೊಲೆಯು ಕಿರಿದಾಗಿರುವ ತುದಿಗೆ ಕಲ್ಲನ್ನು ಅಥವಾ ಮರಳು ತುಂಬಿದ ಗೋಣಿಚೀಲ ಕಟ್ಟುತ್ತಾರೆ. ಬಾವಿಯ ಅಂಚಿನಲ್ಲಿ ಒಬ್ಬ ಆಳು ನಿಂತು ತನ್ನ ಭಾರ ಉಪಯೋಗಿಸಿ ಬಕೆಟ್ಟನ್ನು ಬಾವಿಯೊಳಕ್ಕೆ ಇಳಿಸುತ್ತಾನೆ. ಅದು ನೀರು ತುಂಬಿದ ಮೇಲೆ ಎದುರುಗಡೆ ಕಟ್ಟಿರುವ ವಸ್ತುವಿನ ಭಾರದ ಸಹಾಯದಿಂದ ತಾನಾಗಿಯೇ ಮೇಲಕ್ಕೆ ಎಳುತ್ತದೆ. ಬಾವಿಯ ಅಂಚಿಗೆ ಬಂದಾಗ ಅದನ್ನು ನಾಲೆಯ ಕಡೆಗೆ ತಿರುಗಿಸಲಾಗುತ್ತದೆ. ಈ ವ್ಯವಸ್ಥೆಯನ್ನು ಬಾವಿ ನೀರನ್ನು, ನದಿಯ ನೀರನ್ನು, ವ್ಯವಸಾಯಕ್ಕೆ ಉಪಯೋಗಿಸಲು ಪ್ರಾಚೀನ ಕಾಲದಿಂದಲೂ ಬಳಸುತ್ತಾ ಬರಲಾಗಿದೆ.

## ೬. ಎತ್ತುಗಳ ಸಹಾಯದಿಂದ ಏತ ನೀರಾವರಿ ವಿಧಾನ

ಕೃಷಿಗೆ ಯೋಗ್ಯವಾದ ಭೂಮಿಯ ನಿರ್ದಿಷ್ಟ ಪ್ರದೇಶದಲ್ಲಿ ನಿರ್ಮಾಣ ಮಾಡಿದ ಬಾವಿಯ ಪಕ್ಕದ ಗೋಡೆಗಳ ಮೇಲೆ ಎರಡು ಕಲ್ಲಿನ ಕಂಬಗಳ ಮೇಲೆ ಒಂದು ತೊಲೆಯನ್ನು ಹಾಕಿ ಅದಕ್ಕೆ ಸಾಮಾನ್ಯವಾದ ಚಕ್ರ ಅಥವಾ ಗಾಲಿಯನ್ನು ಜೋಡಿಸುತ್ತಾರೆ. ಗಾಲಿಯ ಮೇಲೆ ಚಲಿಸುವ ಹಗ್ಗದ ಕೆಳಗಿನ ಕೊನೆಯನ್ನು ಕಪಿಲೆಗೂ ಇನ್ನೊಂದು ಕೊನೆಯನ್ನು ಮೇಲ್ಗಡೆಯ ನೊಗಕ್ಕೆ ಕಟ್ಟಿರುತ್ತಾರೆ. ಅದಕ್ಕೆ ಎರಡು ಎತ್ತುಗಳನ್ನು ಕಟ್ಟಿ ತುಂಬಿದ ಬುಟ್ಟಿಯನ್ನು ಮೇಲೆತ್ತುವಾಗ ಇಳಿಜಾರಾದ ದಾರಿಯಲ್ಲಿ ಇಳಿಯುತ್ತವೆ. ಬುಟ್ಟಿಯು ಮೇಲಕ್ಕೆ ಬಂದು ಒಬ್ಬ ಆಳು ನೀರಿನ ನಾಲೆಕಡೆ ತಿರಿಗಿಸುತ್ತಾನೆ. ನೀರು ಖಾಲಿಯಾದ ಬುಟ್ಟಿಯನ್ನು ಬಾವಿಯೊಳಕ್ಕೆ ಪುನಃ ಇಳಿಸುವಾಗ ಎತ್ತುಗಳು ಏರಿಯ ಮೇಲಕ್ಕೆ ಹತ್ತಬೇಕು. ಬುಟ್ಟಿಯ ಬಳಿಯಲಿ ಒಬ್ಬ ಆಳಲ್ಲದೇ ಎತ್ತುಗಳನ್ನು ನೆಡೆಸುದಕ್ಕೆ ಮತ್ತೊಬ್ಬ ಆಳು ಬೇಕು. ಬುಟ್ಟಿಯಿಂದ ೫೦ ರಿಂದ ೬೦ ಅಡಿ ಆಳವಾದ ಬಾವಿಗಳಿಂದಲೂ ನೀರನ್ನು ಹೆಚ್ಚು ಶ್ರಮವಿಲ್ಲದೆ ಎತ್ತಬಹುದು. ಈ ರೀತಿಯಲ್ಲಿ ಬಾವಿಗಳ ನಿರ್ಮಾಣದ ಹಿನ್ನೆಲೆಯನ್ನು ತಿಳಿಯಬಹುದಾಗಿದೆ. ಅಲ್ಲದೆ ಕಾನಹೊಸಹಳ್ಳಿ ಗ್ರಾಮದಲ್ಲಿ ಕುಡಿಯುವ ನೀರಿಗಾಗಿ ನಿರ್ಮಿಸಿದ ಬಾವಿಗಳು ಕಂಡುಬರುತ್ತವೆ. ಅವುಗಳನ್ನು ನೋಡುವುದಾದರೆ.

**ಬಸಪ್ಪನ ಬಾವಿ**

ಈ ಬಾವಿಯನ್ನು ಸುಮಾರು ೬೦ ವರ್ಷಗಳಹಿಂದೆ ನಿರ್ಮಿಸಲಾಗಿದೆ ಎಂದು ತಿಳಿದುಬರುತ್ತದೆ. ನಲವತ್ತು ಜನ ಕುಟುಂಬದವರು ನೀರನ್ನು ದೂರದಿಂದ ತರಲು ಆಗುವುದಿಲ್ಲ ಎಂದು ಉಜ್ಜಿನಿ ಸಂಗನ ಬಸಪ್ಪನ ನೇತೃತ್ವದಲ್ಲಿ ಕುಟುಂಬದವರ ಸಲುವಾಗಿ ಊರಿನ ಶಾನಬೋಗರ ಸಹಾಕಾರ ದಿಂದ ಈ ಬಾವಿಯನ್ನು ನಿರ್ಮಿಸಿದ್ದಾರೆಂದು ತಿಳಿದುಬರುತ್ತದೆ. ಈ ಬಾವಿಯನ್ನು ವೃತ್ತಾಕಾರವಾಗಿ ಕಲ್ಲು ಮತ್ತು ಸಿಮೆಂಟ್‌ನಿಂದ ನಿರ್ಮಿಸಲಾಗಿದ್ದು, ಪ್ರಸ್ತುತವಾಗಿ ಈ ಬಾವಿಯಮೇಲೆ ಕುಡಿಯುವ ನೀರಿನ ಶು ದ್ಧಿಕರಣ ಘಟಕವನ್ನು ನಿರ್ಮಿಸಲಾಗಿದೆ. ಇನ್ನು ಗ್ರಾಮದಲ್ಲಿ ಕಂಡುಬರುವ ಬಾವಿಗಳೆಂದರೆ ಗರಡಿಮನೆ ಬಾವಿ, ಆಂಜನೇಯನ ದೇವಸ್ಥಾನದ ಶಾನಬೊಗರ ಬಾವಿ, ಜೀನದ ಹಟ್ಟಿಯ ಬಾವಿ, ಹೊಂಡದ ಬಾವಿ, ಹೀಗೆ ಕಾನಾಹೊಸಹಳ್ಳಿ ಗ್ರಾಮದಲ್ಲಿ ಬಾವಿಗಳು ಕಂಡುಬರುತ್ತವೆ.

## ಅಡಿಟಿಪ್ಪಣಿಗಳು

೧ ಕೊಟ್ರೇಶ ಎಂ., ಕೋಟೆ-ಕೊತ್ತಲಗಳು, ಪುಟ-೬೫

೨ ಜಿ.ಎಸ್.ಮಠ, ಸುಧಾರಿತ ನೀರಾವರಿ ಪದ್ಧತಿಗಳು, ಪುಟ-೦೪

೩ ವಾಸುದೇವನ್ ಸಿ.ಎಸ್.,ಹಂಪಿ ಪರಿಸರದ ಕೆರೆಗಳು, ಪುಟ-೦೧

೪ ಅದೇ, ಪುಟ-೦೧

೫ ರಾಜರಾಮ ಹೆಗಡೆ (ಸ)., ಕೆರೆ ನೀರಾವರಿ ನಿರ್ವಹಣೆ ಚಾರಿತ್ರಿಕ ಅಧ್ಯಯನ, ಪುಟ-೧೧

೬ ಬಸವರಾಜ ಕುಂಚೂರು., ನಮ್ಮೂರ ಕೆರೆಗಳು, ಪುಟ-೪೨

೭ ವಾಸುದೇವನ್ ಸಿ.ಎಸ್., ಪೂರ್ವೋಕ್ತ, ಪುಟ-೨೩

೮ ಅದೇ, ಪುಟ-೪೩

೯ ಅದೇ, ಪುಟ-೪೯

# ಅಧ್ಯಾಯ-ಆರು
# ಸಮಾಜ ಮತ್ತು ಧರ್ಮ

## ಸಾಮಾಜಿಕ, ಧಾರ್ಮಿಕ ಮತ್ತು ಆರ್ಥಿಕ ಸ್ಥಿತಿಗತಿಗಳು

ಇತಿಹಾಸವು ಮುಖ್ಯವಾಗಿ ಪ್ರಾಚೀನ ಸಮಾಜದ ಉಗಮ, ಬೆಳವಣಿಗೆ, ವೈಭವ ಮತ್ತು ಅವನತಿಗಳನ್ನು ತಿಳಿಸುತ್ತದೆ. ಗತಕಾಲದ ಘಟನೆಗಳನ್ನು ಸರಿಯಾದ ಆಧಾರಗಳ ಮೇಲೆ ನಿರೂಪಿಸುವುದು ಇತಿಹಾಸದ ಮುಖ್ಯ ಕಾರ್ಯವಾಗಿದೆ. ಇತಿಹಾಸವು ಆರಂಭದಲ್ಲಿ ದೇಶದ ರಾಜಕೀಯ ಜೀವನಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟ ರಾಜ್ಯಗಳ ವಿಷಯಗಳನ್ನು ಕಾಲಾನುಕ್ರಮಣಿಕೆಯಲ್ಲಿ ವರ್ಣಿಸುತ್ತದೆ. ಚರಿತ್ರೆಕಾರ ಕಾರ್ಲೈಲನ ಅಭಿಪ್ರಾಯದಂತೆ ಇತಿಹಾಸ ಕೇವಲ ಮಹಾಪುರುಷರ ಜೀವನ ಚರಿತ್ರೆಯಲ್ಲ. ಮಹಾಪುರುಷರ ಪ್ರಮುಖ ಪಾತ್ರವನ್ನು ವಹಿಸಿರುವುದನ್ನು ನಾವು ಅಲ್ಲಗಳೆಯುವಂತಿಲ್ಲ. ಆದರೆ ಜನಸಾಮಾನ್ಯರ ಜೀವನದ ರೀತಿ ನೀತಿಗಳ ಮೇಲೆ ಚರಿತ್ರೆ ಬರವಣಿಗೆಕಾರರು ಸಾಕಷ್ಟು ಆಸಕ್ತಿಯನ್ನು ತೋರಿಸಬೇಕೆಂಬ ಅಭಿಪ್ರಾಯವು ಅಂದಿನ ಚರಿತ್ರೆಕಾರರ ದೃಷ್ಟಿಯಾಗಿದೆ. ಆದುದರಿಂದ ಈ ಹಿಂದೆ ಇತಿಹಾಸಕಾರರ ದೃಷ್ಟಿಯು ಕೇವಲ ರಾಜಕೀಯ ಜೀವನಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟು ರಾಜಕೀಯ ಜೀವನದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ ರಾಜಮಹಾರಾಜರು, ಆಮಾತ್ಯರು, ಮೊದಲಾದವರು ವಿಷಯದಲ್ಲಿ ಹೆಚ್ಚು ವಿವರಣೆಯನ್ನು ಕೊಡುತ್ತಿದ್ದರು. ಆದರೆ ಜೊತೆಗೆ ಜನರು ಸಮುದಾಯ ಜೀವನ ರೀತಿನೀತಿಗಳು, ಅವರ ಆಚರಣೆಗಳು, ನಂಬಿಕೆಗಳು ಜನರ ಸಮಾಜಿಕ ಜೀವನದ ಮುಖಗಳನ್ನು ಮತ್ತು ವಿವಿಧ ಸ್ಥಿತಿಗಳನ್ನು ಸರಿಯಾಗಿ ಅರಿತರೆ ಮಾತ್ರ ಚಾರಿತ್ರಿಕ ವಿಷಯಗಳನ್ನು ತೃಪ್ತಿಕರವಾಗಿ ನಿರೂಪಿಸಬಹುದು.

**ಉದಾಹರಣೆಗೆ** : ಫ್ರಾನ್ಸ್ ಮಹಾಕ್ರಾಂತಿಯ ಚರಿತ್ರೆಯನ್ನು ನಿರೂಪಿಸುವಾಗ ರಾಜಕೀಯ ಅಂಶಗಳ ಜೊತೆಗೆ ಅಂದಿನ ಸಾಮಾಜಿಕ ಶಕ್ತಿಗಳ ಚಿತ್ರಣ ಅತ್ಯಗತ್ಯವಾಗಿದೆ. ಅಂತೆಯೇ ಚರಿತ್ರೆಯ ನಿರ್ಮಾಣವು ಕೇವಲ ಒಂದು ಅಂಶವನ್ನು ಅವಲಂಬಿಸಿಲ್ಲ. ಆದ್ದರಿಂದ ಚರಿತ್ರೆಯ ಅಧ್ಯಯನದಲ್ಲಿ ಆರ್ಥಿಕ, ಧಾರ್ಮಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಅಧ್ಯಯನಗಳಿಗೆ ಪ್ರಾಮುಖ್ಯತೆ ಇದೆ. ಅದರಲ್ಲಿ ಸಾಮಾಜಿಕ ಜೀವನದ ಕ್ಷೇತ್ರಗಳಿಂದ ಹೆಚ್ಚಿನ ಮಾಹಿತಿ ಸಿಗುತ್ತದೆ. ಅನೇಕ ಜನರು ಕೂಡಿದರೆ ಒಂದು ಸಮಾಜವಾಗುತ್ತದೆ. ಸಮಾನ ಸ್ವಭಾವಗಳುಳ್ಳ ಪ್ರಾಣಿಗಳು ಸಾಂಘಿಕವಾಗಿ ಸಂಬಂಧವನ್ನು ಹೊಂದಿರುವ ವ್ಯವಸ್ಥೆಯನ್ನು ಸಮಾಜವೆನ್ನಬಹುದು. ಪರಸ್ಪರ ಪ್ರಜ್ಞೆ ಅಥವಾ ಅರಿವು ಸಮಾಜಕ್ಕೆ ಅತ್ಯಗತ್ಯ. ಸಮಾಜವೆಂದರೆ ಸಾಮಾಜಿಕ ಸಂಬಂಧಗಳ ಬಲೆ. ಸಾಮಾಜಿಕ ಸಂಬಂಧಗಳು ನಿರ್ಬಂಧಿಸುವುದು ಸಮಾಜದ ಕಟ್ಟಲೆಗಳಿಗೆ ಮತ್ತು ನೀತಿನಿಯಮಗಳಿಗೆ ಸೀಮಿತವಾದ ಕೆಲಸ ಸಮಾಜಜೀವಿಗಳ ಕಾರ್ಯ- ಕಲಾಪಗಳು ಪರಸ್ಪರ ಅವಲಂಬನೆ ಮತ್ತು ಸ್ವತಂತ್ರದಿಂದ ಕೂಡಿದೆ. ಸಮಾಜ ನಿರಂತರ ಬದಲಾವಣೆಗಳಿಂದ ಕೂಡಿದ್ದು ಹಾಗೂ ಸಂಕೀರ್ಣ ಸ್ವಭಾವದ ಸಮುದಾಯದ ಮಾನವನ ಜೀವನದ ಸಫಲತೆಗೆ ಅನಿವಾರ್ಯವಾದುದು. ಮನುಷ್ಯನು ಸಮಾಜಜೀವಿ. ಸಮಾಜಕ್ಕೂ ವ್ಯಕ್ತಿಗೂ ನಿಕಟವಾದ ಸಂಬಂಧವಿದೆ. ಈ ಸಂಬಂಧದ ಸ್ವರೂಪವನ್ನು ತಿಳಿಯುವುದು ಅವಶ್ಯಕ. ಮನುಷ್ಯನು ಏಕಾಂಗಿಯಾಗಿ ಜೀವಿಸುವುದು ಸಾಧ್ಯವಿಲ್ಲ. ಮತ್ತು ಸಮಾಜಜೀವನವು ಮನುಷ್ಯನ ನೈಸರ್ಗಿಕ ಸ್ವಭಾವವೆಂದು ಹೇಳಲಾಗಿದೆ.

ಮನುಷ್ಯನು ಇತರರ ಸಂಗಡ ಗುಂಪಿನಲ್ಲಿ ಜೀವಿಸುತ್ತಾನೆ. ಒಂದು ಗುಂಪಿನಲ್ಲಿ ಅನೇಕ ಸಣ್ಣ ಪುಟ್ಟ ಸಂಘಗಳು ಕೆಲವು ಸೀಮಿತ ಉದ್ದೇಶಗಳಿಗೆ, ಸಾಧನೆಗಳಿಗೆ ಸೃಷ್ಟಿಯಾಗುತ್ತವೆ. ಮನುಷ್ಯನು ತನ್ನ ವಿವಿಧ ಬಯಕೆಗಳನ್ನು ಗುಂಪುಗಳ ಮೂಲಕ ಪೂರೈಸಿಕೊಳ್ಳುತ್ತಾನೆ. ಹೀಗೆ ಜೀವಿಸುವಾಗ ಪ್ರತಿಯೊಬ್ಬರ ಕ್ರಿಯೆಯ ಇನ್ನೊಬ್ಬರ ಕ್ರಿಯೆಯ ಮೇಲೆ ಪರಿಣಾಮವನ್ನು ಬೀರುತ್ತವೆ. ಮನುಷ್ಯನ ಪರಸ್ಪರ ಕ್ರಿಯೆಯು ಸಾಮಾಜಿಕ ಜೀವನದ ಅತಿ ಮುಖ್ಯ ವಿಚಾರವಾಗಿದೆ. ಈ ಹಿನ್ನೆಲೆಯಲ್ಲಿ ಒಂದು ಪ್ರದೇಶದ ವಾಸ್ತವಿಕ ಚಿತ್ರಣ ಅರ್ಥ ಮಾಡಿಕೊಂಡಾಗ ಮಾತ್ರ ಆ ಪ್ರದೇಶದ ಇತಿಹಾಸ ಕಟ್ಟಲು ಸಾಧ್ಯವಾಗುತ್ತದೆ.[೧]

## ಸಾಮಾಜಿಕ ಸ್ಥಿತಿಗತಿಗಳು

ಭಾರತೀಯ ಸಮಾಜದಲ್ಲಿ ವರ್ಣವ್ಯವಸ್ಥೆ, ಜಾತಿಪದ್ಧತಿಗಳು ಮಹತ್ತರವಾದ ಪಾತ್ರವನ್ನು ನಿರ್ವಹಿಸಿದೆ. ಕನ್ನಡ ನಾಡಿನ ಸಾಮಾಜಿಕ ಸ್ಥಿತಿಗತಿಗಳು ತಲೆಮಾರಿನಿಂದ ತಲೆಮಾರಿಗೆ ಶತಮಾನದಿಂದ ಶತಮಾನಕ್ಕೆ ಮುಂದುವರಿಕೆಯ ಅಂಶವನ್ನು ಹೊಂದಿರುವಂತಹ ವಿಧಾನವನ್ನು ಕಾಣುತ್ತೇವೆ. ಪ್ರಸ್ತುತ ಕಾನಾಹೊಸಹಳ್ಳಿ ಪ್ರದೇಶವು ಸಹ ಪುರಾತನ ಕಾಲದಲ್ಲಿ ತನ್ನದೇಆದ ಸಂಸ್ಕೃತಿಯನ್ನು ಹೊಂದಿದ್ದು, ಸಾಮಾಜಿಕವಾಗಿ ಶಾಂತಿ ಸಮೃದ್ಧಿಯನ್ನು ಸಾಧಿಸಿತ್ತು ಎನ್ನುವುದಕ್ಕೆ ಸಾಹಿತ್ಯ ಹಾಗೂ ಶಾಸನಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಅಧ್ಯಯನ ಮಾಡಲಾಗಿದೆ. ಭಾರತದ ಇತರ ಭಾಗಗಳಲ್ಲಿ ವರ್ಣವ್ಯವಸ್ಥೆಯಿದ್ದಂತೆ ಈ ಭಾಗದಲ್ಲಿ ಸಹ ವರ್ಣವ್ಯವಸ್ಥೆ ಜಾರಿಯಲ್ಲಿತ್ತು. ಸಮಸ್ತ ಮಾನವ ಸಮೂಹದ ಸಮಾಜವನ್ನು ೪ ವರ್ಗಗಳಾಗಿ ವಿಂಗಡಿಸಲಾಗಿದೆ. ಇದು ವ್ಯಕ್ತಿಗಳ ಸಾಮಾಜಿಕ ಅಂತಸ್ತು ಮತ್ತು ಅವರು ನಿರ್ವಹಿಸಿದ ಪಾತ್ರಗಳಿಗೆ ಅನುಗುಣವಾಗಿ ನಿರ್ಧರಿಸಲ್ಪಟ್ಟಿದೆ. ಇಂತಹ ವರ್ಗಗಳನ್ನು ವರ್ಣವ್ಯವಸ್ಥೆ ಎಂದು ಕರೆಯುತ್ತಾರೆ.

ಪ್ರಾಚೀನ ೪ ವೇದಗಳಲ್ಲಿ ಒಂದಾದ ಋಗ್ವೇದದ ಹತ್ತನೇ ಮಂಡಲವಾದ ಪುರುಷಸೂಕ್ತದಲ್ಲಿ ವರ್ಣಗಳ ಉಗಮಕ್ಕೆ ಸಂಬಂಧಿಸಿದ ಮಾಹಿತಿ ಇದೆ. ಸೃಷ್ಟಿಕರ್ತನಾದ ಬ್ರಹ್ಮನ ಮುಖದಿಂದ ಬ್ರಾಹ್ಮಣರು, ಭುಜಗಳಿಂದ ಕ್ಷತ್ರಿಯರು, ತೊಡೆಗಳಿಂದ ವೈಶ್ಯರು ಮತ್ತು ಪಾದಗಳಿಂದ ಶೂದ್ರರು ಜನಿಸಿದರೆಂದು ತಿಳಿಯಲಾಗಿದೆ. ಧರ್ಮಶಾಸ್ತ್ರಗಳ ಪ್ರಕಾರ ನಾಲ್ಕು ವರ್ಣಗಳೆಂದರೆ ೧. ಬ್ರಾಹ್ಮಣ, ೨. ಕ್ಷತ್ರಿಯ, ೩. ವೈಶ್ಯ, ೪. ಶೂದ್ರ, ಎಂದು ವಿಂಗಡಿಸಿದ್ದಾರೆ.

## ಬ್ರಾಹ್ಮಣರು

ಕಾನಾಹೊಸಹಳ್ಳಿ ಪರಿಸರದ ಸುತ್ತಮುತ್ತಲಿನ ಪ್ರದೇಶದಲ್ಲಿ ಬ್ರಾಹ್ಮಣರು ಸಮಾಜದಲ್ಲಿ ಇತರ ವರ್ಗಗಳಿಗಿಂತಲೂ ಉನ್ನತವಾದ ಸ್ಥಾನಮಾನವನ್ನು ಪಡೆದುಕೊಂಡಿದ್ದಾರೆ. ಬ್ರಾಹ್ಮಣರು ಸಮಾಜದಲ್ಲಿ ಗೌರವ ಮತ್ತು ಪೂಜ್ಯನೀಯ ಸ್ಥಾನವನ್ನು ಹೊಂದಿದವರಾಗಿದ್ದಾರೆ. ಇವರು ಷಟ್ಕರ್ಮ ನಿರತರಾಗಿದ್ದು ಅಧ್ಯಯನದಲ್ಲಿ ಅಧ್ಯಾಪನೆ, ದಾನ ಮತ್ತು ಪರಿಗ್ರಹ ಇವೆ ಷಟ್ಕರ್ಮಗಳಾಗಿದ್ದವು. ಇವುಗಳನ್ನು ಕಟ್ಟುನಿಟ್ಟಿನಿಂದ ಅನುಸರಿಸುತ್ತಿದ್ದರು. ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದ ರಾಜಮನೆತನಗಳ ಕಾಲದಲ್ಲಿ ರಾಜರು, ಅಧಿಕಾರಿಗಳು, ಶ್ರೀಮಂತರು, ಬ್ರಾಹ್ಮಣರಿಗೆ ಭೂಮಿಯನ್ನು ದಾನ ನೀಡಿರುವುದರ ಬಗ್ಗೆ ಶಾಸನಗಳ ಅಧ್ಯಯನಗಳ ಮೂಲಕ ತಿಳಿದುಬರುತ್ತದೆ. ಬ್ರಾಹ್ಮಣರು ತಮ್ಮ ಕೌಶಲ್ಯ ಹಾಗೂ ನೈಪುಣ್ಯತೆಗಳಿಂದ (ಪಾಂಡಿತ್ಯ) ಹಿಂದಿನಿಂದಲೂ ಗುರುಗಳಂತೆ ಪುರೋಹಿತರಂತೆ ಕಾಣಿಸಿಕೊಳ್ಳುತ್ತಿದ್ದರು. ಇವರು ಸಮಾಜ ಮತ್ತು ದೇವಾಲಯಗಳಿಗೆ ತಮ್ಮ ಸೇವೆಯನ್ನು ಮೀಸಲಿರಿಸಿಕೊಂಡು ಜನರಿಂದ, ರಾಜನಿಂದ, ಸಾಮಂತರಿಂದ ಪಡೆದ ದಾನಗಳು ಕಾಣಿಕೆಗಳಿಂದಲೂ ಜೀವನ ಸಾಗಿಸುತ್ತಿದ್ದರು.

ಇವರು ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಎಷ್ಟು ಪ್ರಬಲ ವರ್ಗದವರಾಗಿದ್ದರೆಂದು ಇವರಿಗೆ ನೀಡಿರುವ ಕೊಡುಗೆ ದಾನಗಳಿಂದಲೇ ತಿಳಿಯಬಹುದಾಗಿದೆ. ಇವರು ನಿರ್ವಾಹಕರ ಭಾವನೆಯಿಂದ ನಿಷ್ಕಲ್ಮಶ ಮನೋಭಾವದಿಂದ ಲೌಕಿಕ ವಿದ್ಯೆಯಲ್ಲಿ ಸೇರಿರುವ ನ್ಯಾಯ, ಸಾಹಿತ್ಯ, ಖಗೋಳಶಾಸ್ತ್ರ, ವೈದ್ಯಶಾಸ್ತ್ರ, ರಾಜನೀತಿ ಕುಶಲತೆ ಮೊದಲಾದವುಗಳನ್ನು ಅಭ್ಯಾಸ ಮಾಡುತ್ತಿದ್ದರು.

## ಕ್ಷತ್ರಿಯರು

ಸಾಮಾಜಿಕ ವರ್ಣವ್ಯವಸ್ಥೆಯಲ್ಲಿ ಬ್ರಾಹ್ಮಣರ ನಂತರದ ಸ್ಥಾನವನ್ನು ಕ್ಷತ್ರಿಯರು ಹೊಂದಿದ್ದರು. ಇವರು ಬ್ರಹ್ಮನ ಭುಜಗಳಿಂದ ಜನಿಸಿದವರೆಂದು ತಿಳಿಯಲಾಗಿದೆ. ಅಂದಿನ ಸಮಾಜದಲ್ಲಿ ಸರ್ವೋತ್ತಮ್ಮರೆನಿಸಿದ ಬ್ರಾಹ್ಮಣರು ಕ್ಷತ್ರಿಯರನ್ನು ಆರ್ಥಿಕವಾಗಿ ಅವಲಂಬಿಸಿದರೆ, ಕ್ಷತ್ರಿಯರು ತಮ್ಮ ಪುಣ್ಯಾರ್ಜನೆಯ ವೈದಿಕ ಆಚರಣೆಗಳಿಗಾಗಿ ಬ್ರಾಹ್ಮಣರನ್ನು ಅವಲಂಬಿಸಿದ್ದರು. ಇವರು ಧೈರ್ಯ, ಸಾಹಸ, ತೇಜಸ್ಸು ಗುಣಗಳಿಗೆ ಪ್ರಸಿದ್ಧಿಯಾಗಿದ್ದರು. ಭುಜಬಲದ ಪರಾಕ್ರಮಗಳಿಗೆ ಸುಪ್ರಸಿದ್ಧರಾದವರು. ತಮ್ಮ ಶಕ್ತಿ ಸಾಮರ್ಥ್ಯಗಳಿಂದ ಸಮಾಜವನ್ನು ರಕ್ಷಿಸಿ ಎಲ್ಲೆಯನ್ನು ವಿಸ್ತರಿಸಿಕೊಳ್ಳುತ್ತಾ ತಮ್ಮ ಪ್ರಾಣವನ್ನು ಪಣಕ್ಕಿಟ್ಟು ಹೋರಾಟ ಮಾಡುತ್ತಿದ್ದರು. 'ಸತ್ತರೇ ಸ್ವರ್ಗ ಗೆದ್ದರೇ ರಾಜ್ಯ' ಎಂಬ ವೀರ ಉಕ್ತಿಯಂತೆ ನಡೆಯುವವರೆ ಕ್ಷತ್ರಿಯರಾಗಿದ್ದರು.

ದುಷ್ಟರನ್ನು ಶಿಕ್ಷಿಸಿ ಶಿಷ್ಟರನ್ನು ರಕ್ಷಿಸುವುದು, ಅಶಕ್ತರಿಗೆ ಆಶ್ರಯವನ್ನು ನೀಡುವುದು, ಕಷ್ಟಸಹಿಷ್ಣುತೆಗಳಲ್ಲಿ ಭಾಗಿಯಾಗುವುದು ಕ್ಷತ್ರಿಯರ ಮಾನವೀಯ ಅಂಶಗಳಾಗಿದ್ದವು. ಸಾಮ್ರಾಜ್ಯ ನಿರ್ಮಾಣ ಹಾಗೂ ಅದರ ರಕ್ಷಣ ವ್ಯವಸ್ಥೆಯ ಹೊಣೆ ಹೊತ್ತ ಈ ವರ್ಗ ಯುದ್ಧವನ್ನು ರಾಜ್ಯಾಡಳಿತದ ಒಂದು ಅವಿಭಾಜ್ಯ ಅಂಗವಾಗಿ ಮಾಡಿಕೊಂಡಿರುತ್ತಾರೆ. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ಕ್ಷತ್ರಿಯ ಎಂಬುದು ಒಂದು ಆಳುವ ವರ್ಗವಾಗಿತ್ತು.[೨]

## ವೈಶ್ಯರು

ವೈಶ್ಯರು ಸಮಾಜದ ವರ್ಣವ್ಯವಸ್ಥೆಯಲ್ಲಿ ಮೂರನೇ ಸ್ಥಾನ ಪಡೆದಿದ್ದಾರೆ. ಇವರು ಬ್ರಹ್ಮನ ತೊಡೆಗಳಿಂದ ಜನಿಸಿದವರು ಎಂದು ಋಗ್ವೇದ ತಿಳಿಸುತ್ತದೆ. ವೈಶ್ಯರು ವರ್ತಕರು ಅಥವಾ ವ್ಯಾಪಾರಿಗಳಾಗಿದ್ದುಕೊಂಡು ಆರ್ಥಿಕ ವ್ಯವಸ್ಥೆಯನ್ನು ನಿಯಂತ್ರಿಸಿದ್ದರು. ವ್ಯಾಪಾರವೇ ಇವರ ಪ್ರಮುಖ ವೃತ್ತಿಯಾಗಿದ್ದು ಇವರನ್ನು ಶೆಟ್ಟಿಗಳು ಎಂದು ಕರೆಯುತ್ತಾರೆ. ಇವರು ವರ್ತಕ ವರ್ಗದವರಾಗಿದ್ದರೂ ಮನುಸ್ಮೃತಿಯಲ್ಲಿ ವೈಶ್ಯರ ಕರ್ತವ್ಯಗಳೆಂದರೆ ಪಶುಪಾಲನೆ, ದಾನ ಕೊಡುವುದು ಮತ್ತು ಕೃಷಿಯಲ್ಲಿಯೂ ಸಹ ತೊಡಗುವುದು. ವೈಶ್ಯರು ಬುದ್ಧಿವಂತಿಕೆಗೆ ಹೆಸರುವಾಸಿಯಾಗಿದ್ದು ವೈಜ್ಞಾನಿಕತೆಗೆ ಹೆಚ್ಚು ಒತ್ತುಕೊಟ್ಟಿದ್ದಾರೆ. ಆಡಳಿತದಲ್ಲಿ ಗೌಡ, ಪಟೇಲ, ಶಾನುಭೋಗ ಎಂಬ ಹೆಸರಿನಲ್ಲಿ ಸೇವೆ ಸಲ್ಲಿಸುತ್ತಿದ್ದರು ಎಂಬುದರ ಬಗ್ಗೆ ಕೆಲವೊಂದು ನಿದರ್ಶನಗಳಿವೆ. ಪ್ರಸ್ತುತ ಪರಿಸರದಲ್ಲಿ ವ್ಯಾಪಾರಿಗಳು ತಮ್ಮನ್ನು ವೈಶ್ಯರೆಂದು ಹೇಳಿಕೊಂಡಿದ್ದಾರೆ ಎಂದು ತಿಳಿದುಬರುತ್ತದೆ.[೩]

## ಶೂದ್ರರು

ಸಮಾಜದಲ್ಲಿ ಕಂಡುಬರುವ ನಾಲ್ಕನೇ ವರ್ಗವೇ ಶೂದ್ರರು. ಇವರದು ಬಹುದೊಡ್ಡದಾದ ಗುಂಪಾಗಿತ್ತು. ವರ್ಣಗಳಲ್ಲೇ ಶ್ರೇಷ್ಠರೆಂದು ಗುರುತಿಸಿಕೊಂಡಿದ್ದ ಬ್ರಾಹ್ಮಣವರ್ಗ ಸಮಾಜದ ಆಳ್ವಿಕೆಯ ಸೂತ್ರವನ್ನೇ ಕೈಯಲ್ಲಿ ಹಿಡಿದ ಕ್ಷತ್ರಿಯರೆಂದು ಕರೆದುಕೊಳ್ಳುತ್ತಿದ್ದಂತಹ ಮತ್ತು ವೈಶ್ಯರೆಂದು ಕರೆದುಕೊಳ್ಳುತ್ತಿದ್ದ ವ್ಯಾಪಾರ ವರ್ಗಗಳನ್ನು ಬಿಟ್ಟರೇ ಉಳಿದ ಎಲ್ಲಾ ಜಾತಿಗಳನ್ನು ಶೂದ್ರರೆಂದು ಕರೆಯುತ್ತಾರೆ. ಉದಾಹರಣೆಗೆ ಅಕ್ಕಸಾಲಿಗರು, ಮಡಿವಾಳರು, ಕುಂಬಾರರು, ಕಮ್ಮಾರರು, ಬಡಗಿಗಳು, ಭಜಂತ್ರಿ, ನೇಕಾರ ಮುಂತಾದವರನ್ನು ಶೂದ್ರರು

ಎನ್ನುತ್ತಿದ್ದರು. ಶೂದ್ರರು ಸಾಮಾಜಿಕವಾಗಿ ಕೆಳಸ್ತರದಲ್ಲಿದ್ದು ಉಳಿದ ವರ್ಣದವರು ಪಡೆಯುತ್ತಿದ್ದ ಅನೇಕ ಸೌಲಭ್ಯಗಳಿಂದ ವಂಚಿತರಾಗಿದ್ದರಲ್ಲದೇ ಮೇಲಿನ ಮೂರು ವರ್ಗದವರು ಮಾಡದೇ ಬಿಟ್ಟ ಕೆಲಸಗಳನ್ನು ಶೂದ್ರರು ನಿರ್ವಹಿಸುತ್ತಿದ್ದರು. ಇವರು ಇನ್ನೊಬ್ಬರ ಆಶ್ರಯದಲ್ಲೇ ಇದ್ದುದರಿಂದ ಸ್ವತಂತ್ರವಾದ ಆಸ್ತಿ, ಅಂತಸ್ತು ಇಲ್ಲದೇ ಬಡವರಾಗಿದ್ದರು. ಆದರೂ ಕೂಡ ತಮ್ಮ ಕೆಲಸವನ್ನು ಕೀಳೆಂದು ಪರಿಗಣಿಸಿರಲ್ಲಿಲ್ಲ. ಇವರಿಗೆ ವೇದಗಳನ್ನು ಓದುವುದಕ್ಕಾಗಲೀ ಯಜ್ಞ ಯಾಗಗಳಲ್ಲಿ ಪಾಲ್ಗೊಳ್ಳುವುದಕ್ಕಾಗಲೀ ಅನುಮತಿ ಇರಲಿಲ್ಲ. ಹೀಗೆ ಮೂರು ವರ್ಗದವರ ಅಂದರೆ ಉಚ್ಚ ವರ್ಗದವರ ಸೇವೆಯನ್ನು ಮಾಡಿ ತಮ್ಮ ಮುಕ್ತಿ ಸಾಧಿಸಿ ಅಂತರಂಗ ಬಹಿರಂಗಗಳ ಶುದ್ಧಿ ಶೂದ್ರರನ್ನು ದೇವರಿಗೂ ಬ್ರಾಹ್ಮಣರಿಗೂ ಸಲ್ಲಿಸಬೇಕಾದ ಕರ್ತವ್ಯಗಳನ್ನು ನೆರವೇರಿಸಿ ತಮ್ಮ ತಪಶ್ಚರ್ಯ ಜೀವನವನ್ನು ಮಾಡಿ ಅಥವಾ ನಡೆಸಲು ಅರ್ಹನನ್ನಾಗಿ ಮಾಡುತ್ತದೆಯೆಂದು ಜೈನ ಕೃತಿಕಾರನಾದ ಸೋಮದೇವ ತನ್ನ ನೀತಿವಾಕ್ಯದಲ್ಲಿ ತಿಳಿಸಿದ್ದಾನೆ.[೪]

ಈಗ ವರ್ಣವ್ಯವಸ್ಥೆಯಲ್ಲಿ ಶೂದ್ರರನ್ನು ಕೀಳಾಗಿ ಕಾಣುವ, ಕೀಳಾಗಿ ನಡೆಸಿಕೊಳ್ಳುವುದರಲ್ಲಿ ಹಿಂದಿನ ಕಠಿಣತೆ ಇಲ್ಲದಿದ್ದರೂ ಕೂಡ ಸಂಪೂರ್ಣವಾಗಿ ನಾಶವಾಗಿ ಎಲ್ಲರೂ ಒಂದೇ ಎಂಬ ದೃಷ್ಟಿಯಲ್ಲಿ ಸಮಾಜವು ಬೆಳವಣಿಗೆಯಾಗಿದೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಕೆಲವರು ಕೆಲವು ಕಡೆ ಶೂದ್ರರನ್ನು ಈಗಲೂ ಸಹ ಅಸ್ಪೃಶ್ಯರೆಂದೇ ಪರಿಗಣಿಸಿರುವುದನ್ನು ಕಾಣುತ್ತೇವೆ. ಹೀಗೆ ಸಾಮಾಜಿಕ ವರ್ಣ ವ್ಯವಸ್ಥೆಯಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರ ಸ್ಥಿತಿಗತಿಗಳನ್ನು ಕರ್ತವ್ಯಗಳನ್ನು ಕಾಣಬಹುದು. ಈ ನಾಲ್ಕು ವರ್ಣಗಳ ಮೂಲ ಏನೇ ಇದ್ದರು ಅಂದಿನ ಸಮಾಜದಲ್ಲಿ ಕಂಡುಬರುವ ಸಮಾನತೆಯನ್ನು ತಿಳಿಯಬಹುದಾಗಿದೆ.

## ಜಾತಿವ್ಯವಸ್ಥೆ

ಪ್ರಾಚೀನ ಸಾಮಾಜಿಕ ವ್ಯವಸ್ಥೆಯ ಸಂದರ್ಭದಲ್ಲಿ ವ್ಯಕ್ತಿಗಳನ್ನು ಅವರು ಕೈಗೊಳ್ಳುವ ಉದ್ಯೋಗ ಅಥವಾ ವೃತ್ತಿಗಳ ಹಿನ್ನೆಲೆಯಲ್ಲಿ ಗುರುತಿಸಲಾಗುತಿತ್ತು. ಹಿಂದೆ ಹುಟ್ಟಿಕೊಂಡ ವರ್ಣವ್ಯವಸ್ಥೆ ಅಥವಾ ಜಾತಿವ್ಯವಸ್ಥೆ ಮೊದಲು ಎನ್ನುವುದಕ್ಕೆ ಅನೇಕ ಜಿಜ್ಞಾಸೆಗಳಿವೆ. ವೈದಿಕ ಸಾಹಿತ್ಯದಲ್ಲಿ ವರ್ಣವ್ಯವಸ್ಥೆಯ ಉಗಮದ ಬಗ್ಗೆ ವಿವರವಿದೆ. ಋಗ್ವೇದದ ಪುರುಷಸೂಕ್ತದಲ್ಲಿ ಹೇಳಿರುವಂತೆ ಪುರುಷನ ತಲೆಯಿಂದ ಬ್ರಾಹ್ಮಣ, ಭುಜಗಳಿಂದ ಕ್ಷತ್ರಿಯ, ತೊಡೆಗಳಿಂದ ವೈಶ್ಯ, ಪಾದಗಳಿಂದ ಶೂದ್ರರು ಜನಿಸಿದರೆಂದಿದೆ. ಇದು ಸಮಾಜದ ಏಳಿಗೆಗಾಗಿ ಆದಂತಹ ವಿಂಗಡನೆಯಾಗಿದೆ. ಹಿಂದೂ ಸಂಸ್ಕೃತಿಯಲ್ಲಿ ಅನೇಕ ಕಸುಬುಗಳು ಮಾಡುತ್ತಿದ್ದ ಜನವರ್ಗಗಳಿದ್ದವು. ಅವು ಜಾತಿ ಆಧಾರದ ಮೇಲೆ ನಿಂತಿದ್ದವು ಎಂಬುದಕ್ಕೆ ಯಾವುದೇ ಆಧಾರಗಳಿಲ್ಲ. ರಾಜಮನೆತನಗಳು ತಲೆಯೆತ್ತಿದ್ದಂತೆ ಅವುಗಳ ವಂಶಪರಂಪರೆಯ ಆಡಳಿತ ಆರಂಭವಾಯಿತು. ಅದರೊಂದಿಗೆ ವಿವಿಧ ವೃತ್ತಿಗಳು ಕುಲಕಸುಬುಗಳಿಗೆ ಮಾರ್ಪಾಡುಗೊಂಡವು. ಈ ಕುಲಗಳು ಉಪಪಂಗಡಗಳಾಗಿ ಮೇಲು ಕೀಳು ಎಂಬ ಭಾವನೆಗೆ ಕಾರಣವಾಯಿತು. ಆಗ ವರ್ಣವ್ಯವಸ್ಥೆ ತನ್ನ ಸ್ಥಾನವನ್ನು ಕಳೆದುಕೊಳ್ಳುತ್ತದೆ. ಈ ಪರಿಸರದ ಸಾಮಾಜಿಕ ವ್ಯವಸ್ಥೆಯನ್ನು ಆಳುವ ವರ್ಗ ಮತ್ತು ಶ್ರಮಿಕವರ್ಗವೆಂದು ವಿಂಗಡಿಸಬಹುದು.

ಪ್ರಭುವರ್ಗದಲ್ಲಿ ಪುರೋಹಿತ, ರಾಜ ಹಾಗೂ ವಿವಿಧ ಅಧಿಕಾರಿಗಳನ್ನು ಒಳಗೊಂಡ ರಾಜಕೀಯ ಸಮೂಹ ಶ್ರಮಿಕವರ್ಗ ಅನೇಕ ವೃತ್ತಿಗಳನ್ನು ಒಳಗೊಂಡ ಜನ ಸಾಮಾನ್ಯರನ್ನು ಪ್ರತಿನಿಧಿಸುತ್ತವೆ. ವ್ಯಾಪಾರ ವರ್ಗ ನಡುವೆ ಸಮತೋಲನವನ್ನು ಕಾಯ್ದುಕೊಂಡು ಬಂದಿದೆ. ಅಂದಿನ ಕಾಲದ ಸಾಮಾಜಿಕ ಸಂಘಟನೆಗಳಲ್ಲಿ ಮಹಾರಾಜರು, ಸ್ಥಾನಾಚಾರ್ಯರು, ರಾಜಗುರುಗಳು ಪ್ರಮುಖರಾಗಿದ್ದರು. ಸಮಾಜದಲ್ಲಿ ಬ್ರಾಹ್ಮಣರು ಉನ್ನತವಾದ ಗೌರವಸ್ಥಾನವನ್ನು ಹೊಂದಿದ್ದರು. ಜಾತಿಗಳಲ್ಲೆಲ್ಲ ಬ್ರಾಹ್ಮಣ ಶ್ರೇಷ್ಠ ಎಂಬುದು ಸಾರ್ವತ್ರಿಕವಾಗಿ ಒಪ್ಪಿತವಾಗಿತ್ತು. ಅಂದಿನ ಸಾಹಿತ್ಯ ಮತ್ತು ಕೃತಿಗಳು, ಶಾಸನಗಳು ಈ ಕುರಿತು ವಿವರವಾದ ಮಾಹಿತಿಯನ್ನು ನೀಡುತ್ತವೆ. ಅವುಗಳಲ್ಲಿ ಹದಿನೆಂಟು ಜಾತಿಗಳ ಉಲ್ಲೇಖಗಳಿದ್ದು ಮೊದಲನೆಯದು ಬ್ರಾಹ್ಮಣ ಕೊನೆಯದು ಹೊಲೆಯ ಎನ್ನುವ ವಿವರಗಳಿವೆ ಇದು ಅಂದಿನ ಶ್ರೇಣೀಕೃತ ಸಮಾಜವ್ಯವಸ್ಥೆಯ

ಯಥಾವತ್ತಾದ ಮಾತಾಗಿದ್ದಿರಬಹುದು ಎಂದು ತೋರುತ್ತದೆ. ಏಕೆಂದರೆ ಜಾತಿಗಳು ಹದಿನೆಂಟಕ್ಕಿಂತ ಎಷ್ಟೋ ಹೆಚ್ಚಾಗಿದ್ದವು ಎಂಬುದು ಶಾಸನಗಳಿಂದ ಮತ್ತು ಸಾಹಿತ್ಯ ಕೃತಿಗಳಿಂದ ಗೊತ್ತಾಗುತ್ತದೆ.[೫]

ಪ್ರಸ್ತುತ ವಚನಕಾರರು ಹದಿನೆಂಟು ಜಾತಿಗಳ ಪಟ್ಟಿಯನ್ನು ಕೊಟ್ಟಿದ್ದಾರೆ. ಸೊಡ್ಡಳ ಬಾಚರಸ ಎಂಬುವನು ಮನುಷ್ಯನು ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಕೊಟ್ಟಿದ್ದಾನೆ ಅವುಗಳೆಂದರೆ ಬ್ರಾಹ್ಮಣ(ಶಿಖ), ಕ್ಷತ್ರಿಯ(ನಯನ), ಬಣಜಿಗ(ನಾಶಿಕ), ಒಕ್ಕಲಿಗ(ತುಟಿ), ಗೊಲ್ಲ(ಕರ್ಣ), ಕುಂಬಾರ(ಕೊರಳು), ಪಾಂಚಾಳ(ಬಾಹು), ಉಪ್ಪಾರ(ಅಂಗೈ), ನಾಯಿಂದ(ಉಗುರು), ಡೊಂಬ(ಒಡಲು), ಅಗಸ(ಬೆನ್ನು), ಕಬ್ಬಿಲ(ಪೃಷ್ಟ), ಹೊಲೆಯ(ಒಳದೊಡೆ), ಈಡಿಗ(ಮೊಣಕಾಲು), ಸಮಗಾರ(ಕೆಣಕಾಲು), ಮಚ್ಚಿಗ(ಮೇಗಾಲು) ಮತ್ತು ಶುದ್ಧ ಮಾದಿಗ(ಅಂಗಾಲು) ಅಂಬಿಗರ ಚೌಡಯ್ಯನು ಇದೇ ರೀತಿ ಮನುಷ್ಯನ ದೇಹದ ಪ್ರತಿಯೊಂದು ಅಂಗಕ್ಕೂ ಒಂದೊಂದು ಜಾತಿಯನ್ನು ಸಮೀಕರಿಸಿ ಹದಿನೆಂಟು ಜಾತಿಗಳ ಉಲ್ಲೇಖ ಮಾಡಿದ್ದಾನೆ. ಈ ಉಲ್ಲೇಖಗಳು ಮನುಷ್ಯನ ದೇಹವನ್ನು ಆಧಾರವಾಗಿಟ್ಟುಕೊಂಡು ಸಮಾಜದ ವಿಭಿನ್ನ ಸ್ತರಗಳನ್ನು ವಿವರಿಸುವ ಪ್ರಯತ್ನವಾಗಿ ಕಂಡುಬರುತ್ತದೆ. ಶ್ರಮಜೀವಿಗಳು ತಮ್ಮ ವಂಶಪರಂಪರೆಯಾಗಿ ಬಂದ ವೃತ್ತಿ ವೈಶಿಷ್ಟ್ಯವನ್ನು ಉಳಿಸಿಕೊಳ್ಳುವ ಭಿನ್ನತೆಯು ಜಾತಿವ್ಯವಸ್ಥೆಗೆ ದಾರಿ ಮಾಡಿಕೊಟ್ಟಿರಬಹುದು. ಈ ಶ್ರಮಿಕ ವರ್ಗದವರು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರಗಳಿಗೆ ಕೊಟ್ಟ ಕೊಡುಗೆ ಅಪಾರವಾದುದು. ಉತ್ಪಾದನೆ, ವಿತರಣೆ, ಮಾರಾಟದಲ್ಲಿ ಅವರು ತೊಡಗಿದ್ದರು. ಈ ಪ್ರದೇಶದ ಶಾಸನಗಳಲ್ಲಿ ಪರೋಕ್ಷವಾಗಿ ಶ್ರಮಿಕವರ್ಗ ಮತ್ತು ಒಕ್ಕಲಿಗರನ್ನು ಹೆಸರಿಸಲಾಗುತ್ತದೆ. ಎಲ್ಲ ಜಾತಿಗಿಂತ ಕೆಳಗಿನ ಜಾತಿ ಹೊಲೆಯರು ಮತ್ತು ಮಾದಿಗರು. ಅವರು ವಾಸಿಸುತ್ತಿದ್ದ ಸ್ಥಳಗಳನ್ನು ಹೊಲೆಗೇರಿ ಎಂದು ಕರೆಯುತ್ತಿದ್ದರು. ಈ ಪ್ರದೇಶದಲ್ಲಿ ಮಾದಿಗರನ್ನು ಕೆಳಸ್ಥಾನದವರು ತಮ್ಮ ಸಾಮರ್ಥ್ಯದಿಂದ ಉನ್ನತಸ್ಥಾನವನ್ನು ಪಡೆದಿದ್ದನ್ನು ಸಹ ನಾವು ಕಾಣಬಹುದು.



## ಕುಟುಂಬ ವ್ಯವಸ್ಥೆ

ಯಾವುದೇ ಒಂದು ಪ್ರದೇಶದಲ್ಲಿನ ಸಮಾಜ ಸ್ಥಿತಿಗತಿ ವ್ಯವಸ್ಥೆಯನ್ನು ತಿಳಿಯಬೇಕಾದರೆ ಅಲ್ಲಿನ ಕುಟುಂಬ ವ್ಯವಸ್ಥೆಯನ್ನು ತಿಳಿಯಬೇಕಾಗುತ್ತದೆ. ಆದರೆ ಇಂತಹ ಕುಟುಂಬ ವ್ಯವಸ್ಥೆಯಲ್ಲಿ ತಂದೆ-ತಾಯಿ ಸಹೋದರರು ಅವರ ಪತ್ನಿಯರು ಮಕ್ಕಳು ಸೊಸೆಯರು ಮೊಮ್ಮಕ್ಕಳು ಅಜ್ಜ ಅಜ್ಜಿ ಹೀಗೆ ಮೂರು ಇಲ್ಲವೇ ನಾಲ್ಕು ತಲೆಮಾರಿನವರು ಒಂದೇ ಮನೆಯಲ್ಲಿ ವಾಸಿಸುತ್ತಿದ್ದರು. ಭಾರತ ದೇಶದಲ್ಲಿ ಅತಿ ಹೆಚ್ಚಾಗಿ ಅವಿಭಕ್ತ ಕುಟುಂಬಗಳು ಕಾಣಬಹುದು. ಪುರುಷರು ಕುಟುಂಬದ ಪ್ರಧಾನ ಪಾತ್ರ ವಹಿಸುತ್ತಿದ್ದರು ಕುಟುಂಬದ ಸರ್ವ ಸದ್ಯಸರನ್ನು ಸಾಕಿ ಸಲುಹುವುದು ಯಜಮಾನನ ಕರ್ತವ್ಯವಾಗಿತ್ತು. ಅಂದಿನ ಕಾಲದಲ್ಲಿ ಸಮಾಜದಲ್ಲಿ ತಂದೆಯ ನಂತರ ಕುಟುಂಬದ ಜವಾಬ್ದಾರಿಯು ಹಿರಿಯ ಮಗನಿಗೆ ವರ್ಗಾಹಿಸಲ್ಪಡುತಿತ್ತು. ಕುಟುಂಬದಲ್ಲಿ ಹಿರಿಯ ಮಗನಾದವನು ಕುಟುಂಬದ ಜನರ ಯೋಗಕ್ಷೇಮ ನೋಡಿಕೊಳ್ಳುವುದರ ಜೊತೆಗೆ ಕುಟುಂಬದಲ್ಲಿ ನಿರ್ಣಯ ಅಥವಾ ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ಅವರಿಗೆ ಸೇರಿತ್ತು.[೬] ಪ್ರಸ್ತುತ ಕಾನಾಹೊಸಹಳ್ಳಿ ಪರಿಸರದ ಸುತ್ತಮುತ್ತಲಿನಲ್ಲಿ ಅವಿಭಕ್ತ ಕುಟುಂಬಗಳು ಕಂಡುಬಂದರೂ ಅವು ಹೆಚ್ಚಿನ ಸಂಖ್ಯೆಯಲ್ಲಿಲ್ಲ. ಯಾಕೆಂದರೆ ಇತ್ತಿಚಿನ ನಗರೀಕರಣದಿಂದ ಅವಿಭಕ್ತ ಕುಟುಂಬಗಳು ಕಣ್ಮರೆಯಾಗುತ್ತಿದ್ದು ಹೆಚ್ಚಾಗಿ ವಿಭಕ್ತ ಕುಟುಂಬಗಳು ಗ್ರಾಮೀಣ ಮತ್ತು ನಗರಪ್ರದೇಶಗಳಲ್ಲಿ ಕಂಡುಬರುತ್ತವೆ. ಒಂದು ಮನೆಯಲ್ಲಿ ಗಂಡ, ಹೆಂಡತಿ ಮತ್ತು ಮಕ್ಕಳು ಸೇರಿ ನಾಲ್ಕು ಐದು ಜನ ಸೇರಿ ಸದ್ಯಸರಿರುತ್ತಾರೆ. ಆದರೆ ಹಿಂದಿನ ಅವಿಭಕ್ತ ಕುಟುಂಬಗಳಲ್ಲಿ ಹದಿನೈದು ಇಪ್ಪತ್ತಕ್ಕೂ ಹೆಚ್ಚು ಜನ ಸದಸ್ಯರನ್ನು ಹೊಂದಿದ್ದು ಕುಟುಂಬ ತುಂಬಿತುಳುಕುತ್ತಿತ್ತು. ಆದರೆ ಇತ್ತೀಚೆಗೆ ಅವಿಭಕ್ತ ಕುಟುಂಬಗಳು ಕಣ್ಮರೆಯಾಗುತ್ತಿವೆ.

## ಕುಂಬಾರಿಕೆ

ಕಾನಾಹೊಸಹಳ್ಳಿ ಗ್ರಾಮದಲ್ಲಿರುವ ಕುಂಬಾರ ಸಮುದಾಯದವರ ವೃತ್ತಿಯನ್ನು ಪ್ರಸ್ತುತ ದಿನಗಳಲ್ಲಿ ನಾವು ಕಾಣಬಹುದು. ಅವರು ತಮ್ಮ ಜೀವನಕ್ಕಾಗಿ ತನ್ನ ವೃತ್ತಿಯನ್ನು ಅವಲಂಬಿಸುತ್ತಾ ಬಂದಿದ್ದಾರೆ. ಈ ವೃತ್ತಿಯು ಸನಾತನ ಕಾಲದಿಂದಲೂ ನಡೆದುಕೊಂಡ ಬಂದಂತಹ ವೃತ್ತಿಯಾಗಿದೆ. ಈ ಕುಂಬಾರರನ್ನು ಮತ್ತು ಅವರ ವೃತ್ತಿಯನ್ನು ಕುರಿತಂತೆ ಈ ಕೆಳಕಂಡಂತೆ ತಿಳಿಸಿಲಾಗಿದೆ. ಕುಂಬಾರಿಕೆ ನಿನ್ನೆ ಮೊನ್ನೆಯದಲ್ಲ ತುಂಬಾ ಪ್ರಾಚೀನವಾದ ಕಲೆಯಾಗಿದೆ. ಅದು ಕ್ರಿಪೂ.೭೦೦-೬೫೦ ಶಿಲಾಯುಗ, ನವಶಿಲಾಯುಗದ ಪಳೆಯುಳಿಕೆಯ ಕೆಲಸವನ್ನು ಪರಿವೀಕ್ಷಿಸಿ ಶೋಧಿಸಿದ ಪುರಾತತ್ವ ಶೋಧಕರಿಗೆ ಮುಂದಿನ ಸಣ್ಣ-ದೊಡ್ಡ ಮಡಿಕೆಗಳು ದೊರಕಿವೆ. ಮಡಿಕೆ ತಯಾರಿಸುವ ವಿಧಾನ ಕ್ರಿ.ಶ. ಶ.ಪೂ ೬ನೇ ಶತಮಾನಕ್ಕಿಂತಲೂ ಹಿಂದೆ ಇದ್ದಿರಬಹುದೆಂದೂ ಊಹಿಸಲಾಗಿದೆ. ಮಾನವನ ನಾಗರಿಕತೆಯ ಇತಿಹಾಸವನ್ನು ತಿಳಿಸುವಲ್ಲಿ ಮಡಿಕೆಗಳು ಮಹತ್ವದ ಪಾತ್ರವಹಿಸಿವೆ. ಕುಂಬಾರಿಕೆಯು ಭಾರತದ ಪ್ರಾಚೀನ ಕಲೆಯಾಗಿತ್ತವೆಂಬುದನ್ನು ಅಲ್ಲಗಳೆಯುವಂತಿಲ್ಲ.

'ಕುಂಬಾರ' ಎಂದರೆ ಮಣ್ಣಿನ ಪಾತ್ರೆಗಳನ್ನು ಮಾಡುವನು, ಕುಂಭ (ಕುಂಬ) ಎಂದರೆ ಕಲಶ, ಗಡಿಗೆ ಅದನ್ನು ಮಾಡುವವ ಕುಂಭಕಾರ>ಕುಂಬಗಾರಿ>ಕುಂಬರ>ಕುಂಬಂದ>ಕುಂಬದ>ಕುಂಬಾರ (ಗಾರ ಅರ್ಥಗಳನ್ನು ಸೂಚಿಸುವ ತದ್ಧಿಂತಾಂತ ಪ್ರತ್ಯಯ) ಇವನನ್ನು 'ಕುಂಬರ' ಎಂದು ಕರೆದರೂ ಅಚ್ಚಕನ್ನಡವೇ ಇವನ ಹೆಂಡತಿ ಕುಂಬರತಿ<ಕುಂಬಾರಗಿತ್ತಿ. ಇವನ ಕಾರ್ಯಗಾರ ಕುಂಬಗಾರ ಸಾಲೆ<ಕುಂಬಾರಸಾಲೆ ಇಲ್ಲಿ ಇವನು ಬಳಸುವ ಮುಖ್ಯವಾದ ಉಪಕರಣಗಳು ಎರಡು. 'ತಿಗುರಿ' ಮತ್ತು 'ತಿಗುರಿಕೋಲು' ಇವನ್ನೆ 'ಕುಂಬಾವಿನ ಚಕ್ರ, ಕುಲಾಲ ಚಕ್ರ, ಕೋವರನ ಚಕ್ರ ಎಂದು ಕರೆಯುವರು. ಇವನ್ನು ಬಳಸಿ ಆತ ಮಾಡುವುದು ಕುಂಬಾರಿಕೆ, ಕುಂಬಾರವೆಸ, ಬಾನೆ ಎಂದರೆ ಕುಲಾಲಕರಣ ಇವರಿಗೆ ಕೊಟ್ಟ ದಾನವನ್ನು ಕುಂಬಾರಗೊಡಿಗಿಯೆಂದೂ ಬಿಟ್ಟ ತೆರಿಗೆಯನ್ನು ಕುಂಬಾರ ಪೇಳ್ಯಂದ ಎಂದು ಶಾಸನಗಳಲ್ಲಿ ವರ್ಣಿತವಾಗಿವೆ.

## ಉಪಕರಣಗಳು

**ಅವಿಗಿ** – ಗಡಿಗಿ, ಹಂಚು ಮುಂತಾದವುಗಳನ್ನು ಸುಡುವ ಕುಂಬಾರನ ಒಲೆ (ಕುಲುಮೇ) ಅವಿಗೆ, ಅವಿಗಿ, (ಅಗಿ) (ಬ.ಕ)

**ಅವಿಗಿಗೋಡೆ** – ಅವಿಗಿಯ ಗೋಡೆ ಇದು ಮೆಲ್ಗಡೆ ಎತ್ತರವಾಗಿದ್ದು ಕೆಳಗಡೆ ಇಳಿಜಾರಾಗಿರುತ್ತದೆ (ಆರೋಹಣ ಕ್ರಮದಲ್ಲಿರುತ್ತಧೆ.)

**ಅವಿಗಿಬಾಯಿ** – ಅವಿಗಿಯ ಮುಂಭಾಗದಲ್ಲಿರುವ ರಂಧ್ರಗಳು ಸದೆ ಹಾಕಲಿಕ್ಕೆ ಅನುಕೂಲವಾಗುವಂತೆ ರಂಧ್ರಗಳು ಅಗಲವಾಗಿರುತ್ತವೆ.

**ಕಲ್ಲು** – ಶಿಲಿ, ಬಂಡೆ(ಬ.ಕ) ಕೊಲ್ಲ, ಕಲ್ಲ.

**ಗುಂಡಕಲ್ಲೆ** – ಮಣ್ಣಿನ ಹೆಂಡೆಗಳನ್ನು ಪುಡಿ ಮಾಡಲು ಬಳಸುವ ದುಂಡನೆಯ ಕಲ್ಲು.

**ಸ್ವಾರಿಕಲ್ಲೆ** – ಸೊರೆಗಳನ್ನು ಮಾಡುವಾಗ ಬಳಸುವ ಕಲ್ಲು. ಹಸಿಸೊರೆ ಗಡಿಗೆಗಳನ್ನು ಮಾಡುವಾಗ ಈ ಕಲ್ಲುಗಳನ್ನು ಅವುಗಳ ಒಳಗಡೆ ಹಿಡಿದಿರುತ್ತಾರೆ. ಹೊರಗಡೆ ನೊಳುಪಿನಿಂದ ಬಡಿಯುತ್ತಾರೆ.

**ಹರವಿಕಲ್ಲೆ** – ಹಸಿ ಹರವಿಯನ್ನು ಮಾಟ ಮಾಡುವಾಗ ಬಳಸುವ ಕಲ್ಲು ಇದು ಮಾಡಗಕೊಲ್ಲ, ಮಾಡಗಕಲ್ಲ.

**ಕುಳ್ಳ** – ದನಗಳ ಸಗಣಿಯಿಂದ ಮಾಡಿರುತ್ತಾರೆ. ಅಂಗೈ ಅಗಲವಾಗಿರುತ್ತವೆ. ಇದು ಒಣಗಿದ ನಂತರ ಅವಿಗೆಯಲ್ಲಿ ಉರುವಲಿಕ್ಕೆ ಉಪಯೋಗಿಸುತ್ತಾರೆ.

**ಕಾ ಕುಳ್ಳ** – ಒಣಗಿದ ದನಗಳ ಸಗಣಿ, ಕುಂಬಾರ ಹುಡುಗ-ಹುಡುಗಿಯರು ಭೂಮಿ-ಭೂಮಿ ತಿರುಗಾಡಿ ಇವುಗಳನ್ನು ಕುಳ್ಳುಗಳನ್ನು ಆಯ್ದುಕೊಂಡು ಬರುತ್ತಾರೆ. ಅವಿಗೆಯಲ್ಲಿ ಮಡಿಕೆಯನ್ನು ಸುಡಲಿಕ್ಕೆ ಉಪಯೋಗಿಸುವರು.

**ಗುದ್ಲಿ** – ನೆಲವನ್ನು ಅಗಿಯಲು ಬಳಸುವ ಕಬ್ಬಿಣದ ಉಪಕರಣ.

**ಕೈ ಗುದ್ಲಿ**–ಸಣ್ಣಗುದ್ಲಿ.

**ಚಾಣಿಗಿ** – ಮಣ್ಣನ್ನು ಸಾಣಿಯಲು ಉಪಯೋಗಿಸುವ ಸಾಧನ. ಇದರಲ್ಲಿ ಮಣ್ಣು ಮಾತ್ರ ಬೀಳುವಂತೆ ಸಣ್ಣ-ಸಣ್ಣ ರಂಧ್ರಗಳು ಇರುತ್ತಾರೆ. ಸಾಣಿಗಿ-ಬಾಣಿಗಿ.

**ತಗಡು** – ಲೋಹದ ತೆಳ್ಳನೆಯ ಪದರು.

**ಕಬ್ಬಿಣದ ತಗಡು** – ಕಬ್ಬಿಣದಿಂದ ಮಾಡಿದ ತೆಳ್ಳನೆಯ ಪದರು, ಕಬ್ಬಿಣ ಪಟ್ಟಿ ಮಡಿಕೆ ಕುಡಿಕೆಗಳ ಕಂಠದಲ್ಲಿ ಗೆರೆ ಎಳೆಯಲು ಇದನ್ನು ಬಳಸುವರು.

**ತಿಗರಿ ತಗಡು** – ನೋಡಿ, ತಿಗರಿ ತಗಡು.

**ತಿಗರಿ** – ಕುಂಬಾರನ ಚಕ್ರ ಮಣ್ಣನ್ನು ಹದಮಾಡಿ ತಿಗರಿಯಲ್ಲಿಟ್ಟು ತಿರುಗಿಸುತ್ತಾರೆ. ತಿಗರಿ ಎರಡು ಮೀ. ಸುತ್ತಳತೆಯನ್ನು ಹೊಂದಿರುತ್ತದೆ.

**ತಿಗರಿಯ ಕೋಲು** – ತಿಗರಿಯನ್ನು ತಿರುಗಿಸಲಿಕ್ಕೆ ಬಳಸುವ ಕೋಲು.

**ತಿಗರಿಗಡ್ಡಿ** – ತಿಗರಿಯ ಮಧ್ಯಭಾಗ ಇದು ಬಿರುಸಾಗಿರುತ್ತದೆ. ತಿಗರಿಯಲ್ಲಿರುವ ಹಸಿಮಣ್ಣಿನ ಬಾರವೆಲ್ಲ ಗಡ್ಡೆಯ ಮೇಲೆ ಇರುತ್ತದೆ.

**ತಿಗರಿ ತಗಡು** – ತಿಗರಿಯಲ್ಲಿ ಹದಮಾಡಿದ ಮಣ್ಣನ್ನು ಹಾಕಿ ತಿರುಗಿಸುವಾಗ ಮಣ್ಣು ತೆರೆಬಂದಾಗ ಅದನ್ನು ಆಚೆ-ಇಚೆ ಸರಿಸಲಿಕ್ಕೆ ಉಪಯೋಗಿಸುವ ತಗಡು.

**ತಿಗರಿಯ ಹಲ್ಲು** – ಗಡ್ಡೆಗೆ ಮತ್ತು ತಿಗರಿಯ ಮೈಗೆ ಅಂಟಿಕೊಂಡಿರುವ ಕಟ್ಟಿಗೆಯ ತುಂಡಗಳು ಕುಂಬಾರನಿಗೆ ತಿಗರಿ ತಿರುಗಿಸಲಿಕ್ಕೆ ಇವು ತುಂಬಾ ಅನುಕೂಲವಾಗಿರುತ್ತವೆ. ಒಂದು ತಿಗರಿಗೆ ನಾಲ್ಕು ಅಥವಾ ಐದು ಹಲ್ಲುಗಳು ಇರುತ್ತವೆ. (ಬ.ಕ) ತಿಗರಿ ಕೈ.

**ತಿಗರಿ ಗೂಟ** – ಶಂಖಕಾರವಾಗಿರುವ ಕಟ್ಟಿಗೆಯ ಸಾಧನ. ಇದರ ಮುಂಭಾಗ ಚೂಪಾಗಿದ್ದು ಹಿಂಭಾಗ ಅಗಲವಾಗಿದ್ದು ಬಿರುಸಾಗಿರುತ್ತದೆ. ಇದರ ಮೇಲೆ ತಿಗರಿ ಇಟ್ಟಿರುತ್ತಾರೆ. ತಿಗರಿಯ ಬಾರ ಈ ಸುಲದ ಗೂಟದ ಮೇಲೆಯೇ ಇರುತ್ತದೆ (ಬ.ಕ) ಸುಲದ ಗೂಟ.

**ಬಡಮಣಿ** – ಕಟ್ಟಿಗೆಯ ಉಪಕರಣ. ಅವಿಗೆಯ ತಳಭಾಗ ಹಾಗೂ ಕುಂಬಾರರು ಗಡಿಗೆ ಮಡಿಕೆಗಳನ್ನು ಮಾಡುವ ಸ್ಥಳ ಕೆಟ್ಟಿದ್ದರೆ ಅದನ್ನು ದುರಸ್ಥಿ ಮಾಡಲಿಕ್ಕೆ ಈ ಉಪಕರಣವನ್ನು ಬಳಸುತ್ತಾರೆ. ನೆಲ ತಗ್ಗು ಆಗಿದ್ದರೆ ಉಸುಕು ಮಣ್ಣು ಹಾಕಿ ಬಡಮಣಿಯಿಂದ ಬಡಿಯುತ್ತಾರೆ.

**ಬನಜರಿಗಿ** – ಅವಿಗಿಯಲ್ಲಿ ಮಡಿಕೆಗಳನ್ನು ಸುಡಲಿಕ್ಕೆ ಬಳಸುವ ಒಣಗಿದ ಮರಕ್ಕೆ ಒಂದು ಜಾತಿಯ ಕಂಠಿ. ಇದಕ್ಕೆ ಮುಳ್ಳುಗಳಿರುವುದಿಲ್ಲ. ಇದು ಒಣಗಿದರೆ ಉರುವಲಿಕ್ಕೆ ತುಂಬಾ ಅನುಕೂಲ. ಬೆಳಗಾವಿ ಪ್ರದೇಶದ ಕುಂಬಾರರು ಇದನ್ನು ಹೆಚ್ಚು ಉಪಯೋಗಿಸುತ್ತಾರೆ.

**ಬುಟ್ಟಿ** – ಮಣ್ಣು ತುಂಬಲು ಉಪಯೋಗಿಸುವ ಬಿದರಿನಿಂದ ಮಾಡಿದ ಸಾಧನ (ಬ.ಕ) ಪುಟ್ಟಿ.

**ಸೆದಿ** – ಅವಿಗೆಯಲ್ಲಿ ಗಡಿಗೆ ಮಡಿಕೆಗಳನ್ನು ಸುಡಲು ಬಳಸುವ ಒಣಗಿದ ಮರದ ತೊಗಟೆ ಜೋಳದ ರವದಿ ಎಲ್ಲವೂ ಸೇರಿ ಸೆದಿ ಎನ್ನುವರು.

**ಸೊಳುವು** – ಹಸಿಯಾದ ಗಡಿಗೆ ಮಡಿಕೆ ಇತರ ಮಣ್ಣಿನ ಪಾತ್ರೆಗಳಿಗೆ ಒಂದು ರೂಪು ಕೊಡಲು ಬಳಸುವ ಕಟ್ಟಿಗೆಯ ಉಪಕರಣ. ಚೌಕಕಾರವಾಗಿದ್ದು ಸಮತಟ್ಟಾಗಿರುತ್ತದೆ.

**ಕುದು ಸೊಳವು** – ಮಣ್ಣಿನ ಪಾತ್ರೆಗಳ ತಳಭಾಗ ದಪ್ಪವಾಗುವಂತೆ ಮಾಡಲು ಬಳಸುವ ಸೊಳವು (ಬ.ಕ) ದಪ್ಪ ಸೊಳವು.

**ತೆಳು ಸೊಳವು** – ಮಡಿಕೆಗಳ ಬದಿ, ಕಂಠ, ಮಾಟಬರುವಂತೆ ಮಾಡಲು ಉಪಯೋಗಿಸುವ ಸೊಳವು.

**ಹಣಿಗಿ** – ತಲೆಕೂದಲನ್ನು ಬಾಚುವ ಸಾಧನ (ಬ.ಕ) ಬಾಚಣಿಕೆ.

**ಕಟ್ಟಿಗಿ ಹಣಿಗಿ** – ಹಸಿಯಾದ ಮಣ್ಣಿನ ಪಾತ್ರೆಗಳ ಕಂಠ, ಬದಿಗಳ ಸುತ್ತಲೂ ಗೀರುಹಾಕಲಿಕ್ಕೆ ಬಳಸುವ ಸಾಧನ.

## ಆಚರಣೆ ಮತ್ತು ನಂಬಿಕೆ

ಒಂದು ಸಮಾಜದ ವ್ಯಕ್ತಿಗಳು ಪರಂಪರಾಗತವಾಗಿ ನಡೆಸಿಕೊಂಡು ಬರುವ ದೀರ್ಘವಾದ ನೀತಿ ನಡತೆಗಳಿಗೆ ಆ ಸಮಾಜದ ಪ್ರತಿಯೊಬ್ಬ ವ್ಯಕ್ತಿಯು ಬದ್ಧನಾಗಿ ನಡೆದುಕೊಳ್ಳಬೇಕು ಈ ನಡವಳಿಕೆ ಹೆಚ್ಚು ಕಾಲ ರೂಢಿಗೆ ಬಂದಾಗ ಆಚಾರ ಎನಿಸಿಕೊಳ್ಳುತ್ತದೆ.[೬] ಸಮಾಜವು ವ್ಯವಸ್ಥಿತವಾಗಿ ನಡೆಯಲು ಜನಪದರು ಕೆಲವೊಂದು ಆಚಾರಗಳನ್ನು ರೂಢಿಗೆ ತಂದರು. ಅಂತಹ ಆಚಾರಗಳಲ್ಲಿ ನಂಬಿಕೆಗಳು ಗಣನೀಯವಾದ ಪಾತ್ರ ವಹಿಸುತ್ತವೆ. ನಂಬಿಕೆಗಳಿಗೆ, ಸಂಪ್ರದಾಯಗಳಿಗೆ ಮೂಲ ಮಾನವ ಸಂಸ್ಕೃತಿಯ ಅವಿಭಾಜ್ಯ ಅಂಗವಾದ ನಂಬಿಕೆಯು ಇತರ ಜೀವನವಿಧಾನ ವಿವಿಧ ನಡವಳಿಕೆಗಳನ್ನು ಪ್ರತಿಬಿಂಬಿಸುತ್ತದೆ. ಇವುಗಳ ವ್ಯಾಪ್ತಿ ಗ್ರಾಮೀಣ ಜನರಿಗೆ ಮಾತ್ರ ಸೀಮಿತವಾಗಿದೆ. ಈಗಾಗಿ ನಂಬಿಕೆಗಳ ಅರಿವು ಮಾನವನ ಸಂಸ್ಕೃತಿಯಲ್ಲಿ ಮಾತ್ರವಲ್ಲದೆ ಮಾನವನ ನಾಗರಿಕತೆಯಲ್ಲಿ ಕಂಡುಬರುತ್ತದೆ. ಭಾರತೀಯ ಜೀವನದಲ್ಲಿ ಧಾರ್ಮಿಕ ನಂಬಿಕೆಗಳು ಪ್ರಬಲವಾಗಿ

ಕೆಲಸ ಮಾಡುತ್ತವೆ. ಇದು ಮಾನವನ ಸಾಮೂಹಿಕ ಬದುಕಿನ ಸಂದರ್ಭದಲ್ಲಿ ಹುಟ್ಟಿರಬೇಕು. ಇವುಗಳ ಹುಟ್ಟಿನ ಹಿಂದೆ ಜೀವನಾನುಭವವಿದೆ. ಪ್ರಕೃತಿಯಲ್ಲಿ ನಡೆಯುವ ಆನೇಕ ಘಟನೆಗಳ ಕುರಿತಾದ ಅಪೂರ್ವ ಕಲ್ಪನೆ ಅತಿ ಮಾನುಷ ಶಕ್ತಿಯ ಭಯ ಇತ್ಯಾದಿಗಳ ನಂಬಿಕೆಗಳ ಹುಟ್ಟಿಗೆ ಕಾರಣವಾಗಿರುವುದು.[೭] ಗ್ರಾಮೀಣ ಪ್ರದೇಶಗಳಲ್ಲಿ ದೇವರಿಗೆ ಹರಕೆ ಮಾಡಿಕೊಳ್ಳುವ(ಹೊರುವ) ಪದ್ಧತಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದದ್ದು ಕಾಣಬರುತ್ತದೆ. ರೋಗರುಜೀನಗಳನ್ನು (ಕಾಯಿಲೆಗಳನ್ನು) ವಾಸಿ ಮಾಡುತ್ತದೆ ಎಂಬುದು ಅವರ ನಂಬಿಕೆ. ಇದರಿಂದ ಅವರು ಹಲವಾರು ರೀತಿಯ ಆಚರಣೆಗಳನ್ನು ಆಚರಿಸುತ್ತ ಬಂದಿದ್ದು ತಿಳಿದುಬರುತ್ತದೆ. ಹರಕೆ ಕಟ್ಟಿಕೊಂಡರೆ ದೇವರು ರಕ್ಷಿಸುತ್ತಾನೆ ಎಂಬ ನಂಬಿಕೆಯೇ ಅವರ ನೆಮ್ಮದಿಗೆ ಕಾರಣವಾಗಿ ರೋಗ ನಿವಾರಣೆಯಲ್ಲಿ ಮಹತ್ತರವಾದ ಪಾತ್ರ ವಹಿಸಿದ್ದು ಕಂಡುಬರುತ್ತದೆ. ನಂಬಿಕೆಗಳು ಹಳ್ಳಿಗಳಲ್ಲಿ ಆಚಾರ ವಿಚಾರ ಮತ್ತು ಪದ್ಧತಿಗಳಲ್ಲಿ ಪ್ರಚಲಿತವಾಗಿವೆ.

ಐತಿಹಾಸಿಕವಾಗಿ ಇವುಗಳನ್ನು ಗಮನಿಸಿದರೆ ಬಹುತೇಕ ನಂಬಿಕೆಗಳು ಪ್ರಕೃತಿ ಮೂಲವಾಗಿ ಹುಟ್ಟಿಕೊಂಡವುಗಳೇ ಆಗಿವೆ. ಈ ನಂಬಿಕೆಗಳು ಮಾನವನ ಜೀವನವನ್ನು ನಿಯಂತ್ರಿಸುವ ಪ್ರಬಲ ಶಕ್ತಿಗಳಾಗಿ ಬೆಳೆದು ಉಳಿದುಕೊಂಡು ಬಂದಿವೆ.[೮] ಸಂಸ್ಕೃತಿಯ ಪುನಾರುತ್ಥಾನವೇ ಹಬ್ಬ ಎಂದು ಕರೆಯುತ್ತಾರೆ. ಅದು ತನ್ನದೇ ಆದ ನಂಬಿಕೆ ಮತ್ತು ಆಚರಣೆಗಳ ಮೇಲೆ ನಿಂತು ಸಂಪ್ರದಾಯಗಳನ್ನು ಪ್ರತಿಬಿಂಬಿಸುತ್ತದೆ. ಜನಪದ ಸಂಸ್ಕೃತಿಗೆ ಆಚರಣೆಯೇ ಬೆನ್ನೆಲಬು. ಆಚರಣೆ ಇಲ್ಲದೆ ಯಾವ ದೈವದ ಅಸ್ತಿತ್ವವು ಸಾಧ್ಯವಿಲ್ಲ. ಜನಪದ ಧರ್ಮ ಎಂಬುದು ಇಂದು ಆಚರಣೆಯ ಧರ್ಮವಾಗಿ ಮಾರ್ಪಾಡುಗೊಳ್ಳುತ್ತವೆ. ಇದರಿಂದ ದೇವತೆಗೂ ಸಮಾಜಕ್ಕೂ ಸಂಬಂಧದಲ್ಲಿ ಅಭಿನಯಗೊಳ್ಳುವ ಕ್ರಮದ ಆಚರಣೆಗಳನ್ನು ಹಾಗೂ ಅದರ ಸ್ವರೂಪವನ್ನು ತಿಳಿಸುವಲ್ಲಿ ಅದು ಸಹಾಯಕವಾಗಿದೆ.

ಸಂಪ್ರದಾಯ ಅಂಗಿಕರಿಸಿದ ಧಾರ್ಮಿಕ ಮತ್ತು ಯಾಂತ್ರಿಕ ಆಚರಣೆಗಳ ಮೊತ್ತವೇ ಆಚರಣೆ. ನಂಬಿಕೆ ಆಚರಣೆಯ ಬೆನ್ನೆಲಬು. ನಂಬಿಕೆಯು ಸಿದ್ಧಾಂತದ ಆಚರಣೆಗಳನ್ನು ಮುಂದುವರಿಸಿಕೊಂಡು ಹೋಗುವಂತೆ ಮಾಡುತ್ತದೆ.[೯] ಹಬ್ಬದ ಸಂದರ್ಭದಲ್ಲಿ ಆಚರಿಸುವ ಆಚರಣೆಗಳು ಆ ಗ್ರಾಮದ ಹಾಗೂ ಅಲ್ಲಿಯ ದೇವತೆಯ ಮಹತ್ವವನ್ನು ಪ್ರತಿಬಿಂಬಿಸುತ್ತದೆ. ಜನರು ಭಯ ಭಕ್ತಿಯಿಂದ ಆಚರಣೆಗಳನ್ನು ಆಚರಿಸಿ ಪ್ರತಿಯೊಂದರಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದನ್ನು ಕಾಣುತ್ತೇವೆ. ಪ್ರಸ್ತುತವಾಗಿ ಈ ಗ್ರಾಮಗಳಲ್ಲಿ ಆಚರಣೆಗಳು ರೂಢಿಯಲ್ಲಿರುವುದು ಕಂಡುಬಂದಿದೆ. ಸಂಸ್ಕೃತಿಯ ಒಂದು ಭಾಗವಾದ ನಂಬಿಕೆ ಆಚರಣೆಯು ಪರಿಸ್ಥಿತಿಯಲ್ಲಿ ಜಾತ್ರೆ, ಉತ್ಸವ, ಹಬ್ಬ ಹರಿದಿನಗಳು ಮುಂತಾದವುಗಳಲ್ಲಿ ಸಮಾವೇಶಗೊಂಡಿರುತ್ತವೆ. ಒಂದು ಗ್ರಾಮ ಅಥವಾ ಸಮುದಾಯದ ಸಂಸ್ಕೃತಿಯನ್ನು ತಿಳಿದುಕೊಳ್ಳುವಲ್ಲಿ ಎಲ್ಲಾ ಕ್ಷೇತ್ರಗಳು ನಿರ್ಧರಿತ ಅಂಶಗಳಾಗಿವೆ ಸಂಸ್ಕೃತಿಯೆಂಬುದು ನಿಂತ ನೀರಲ್ಲ. ಅದು ಹರಿಯುವ ನೀರಾಗಿದೆ. ಗ್ರಾಮದಿಂದ ಗ್ರಾಮಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಬದಲಾವಣೆಯಾಗಿ ಬೆಳೆಯುತ್ತಿರುವುದು ವಿಶೇಷವಾಗಿದೆ. ಮನುಷ್ಯ ಅಕ್ಷರ ಬಲ್ಲವನಾಗುತ್ತಿದಂತೆಯೇ ಪರಂಪರಾಗತವಾಗಿ ಉಳಿದು ಬಂದ ಕಲೆ, ನಂಬಿಕೆ, ಆಚರಣೆ, ಉತ್ಸವ ಮುಂತಾದ ಚಟುವಟಿಕೆಗಳು ಎದುರಾಗುವ ಅಪಾಯದ ಸನ್ನಿವೇಶ ನಿರ್ಮಾಣವಾಗಿವೆ.

ಈ ಹಿನ್ನೆಲೆಯಲ್ಲಿ ಅವುಗಳ ಕುರಿತು ಅಧ್ಯಯನಕ್ಕೆ ಹೆಚ್ಚಿನ ಮಹತ್ವ ನೀಡುವುದು ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಈಗಾಗಿ ಕಾನಾಹೊಸಹಳ್ಳಿ ಪರಿಸರಕ್ಕೆ ಸಂಬಂಧಿಸಿದಂತೆ ಹಲವಾರು ನಂಬಿಕೆಗಳು ಆಚರಣೆಗಳು ಕಂಡುಬಂದಿದ್ದು, ಅವುಗಳಲ್ಲಿ ಹಬ್ಬ ಹರಿದಿನಗಳ ಆಚರಣೆ ಜಾತ್ರೆ ಉತ್ಸವಗಳ ಆಚರಣೆಗಳು ಕಂಡುಬಂದಿವೆ. ಅವುಗಳನ್ನು ಈ ಕೆಳಗಿನಂತೆ ಹೇಳಲಾಗಿದೆ.

## ವಿವಾಹ

ವಿವಾಹ ಪವಿತ್ರಬಂಧ ಎಂಬ ಭಾವನೆಯಿದೆ. ಇದೊಂದು ಸಾಮಾಜಿಕ ಒಪ್ಪಂದ. ಜೀವನದ ಪರಸ್ಪರ ವೈಯಕ್ತಿಕ ತ್ಯಾಗಗಳಿಂದ ಕೂಡಿರುತ್ತದೆ.[೧೦] ಹಲವಾರು ಸಮುದಾಯಗಳು ವಿವಿಧ ಬಗೆಯ ವಿವಾಹ ಆಚರಣೆಗಳನ್ನು ರೂಢಿಸಿಕೊಂಡಿವೆ. ಉದಾಹರಣೆಗೆ ಕಾನಾಹೊಸಹಳ್ಳಿ ಪರಿಸರದಲ್ಲಿ ಊರನಾಯಕರು ಗಂಡಿನ ಮನೆ ಮುಂದೆ ವಿವಾಹಕಾರ್ಯ ನೆರವೇರಿಸಿದರೆ, ಮ್ಯಾಸನಾಯಕರು ಹೆಣ್ಣಿನ ಮನೆ ಮುಂದೆ ಬತ್ತಿತೂಪ್ಪಲಿನ ಹಂದರದ ಅಡಿಯಲ್ಲಿ ವಿವಾಹಕಾರ್ಯ ಮಾಡುತ್ತಾರೆ. ಈ ಒಂದು ಸಮುದಾಯ ಅಷ್ಟೇ ಅಲ್ಲದೆ ವಿವಿಧ ಜಾತಿ, ಸಮುದಾಯದಲ್ಲಿ ವಿಭಿನ್ನ ವಿವಾಹದ ಆಚರಣೆ ಇದೆ. ಆದರೆ ಇಂದು ಕಾಲ ಬದಲಾದಂತೆ ಅಂತರ್‌ಜಾತೀಯ ವಿವಾಹಗಳು ಹೆಚ್ಚಾಗುತ್ತಿವೆ. ಮನುಕುಲ ಒಂದೇ ಎನ್ನುವ ಆಧುನಿಕ ಶಿಕ್ಷಣದ ಮಂತ್ರವು ಮೇಲು ಕೀಳು ಬಡವಬಲ್ಲಿದ ಸಮಾಜದಲ್ಲಿ ತೊಡೆದುಹಾಕುವಲ್ಲಿ ವಿವಾಹ ಕಾರಣವಾಗುತ್ತದೆ. ಆದರೆ ಗ್ರಾಮೀಣ ಭಾಗದಲ್ಲಿ ಮಾತ್ರ ವಿವಾಹದ ಕಟ್ಟುಪಾಡುಗಳು ಗೊಲ್ಲರ, ಕುರುಬರ, ದಲಿತರಲ್ಲಿ ಇಂದಿಗೂ ಬದಲಾಗಿಲ್ಲ.

## ಕೃಷಿ ಆಚರಣೆ

ಭಾರತ ಕೃಷಿಪ್ರಧಾನ ದೇಶ. ರೈತ ದೇಶದ ಬೆನ್ನೆಲುಬು. ಭಾರತ ಶೇಕಡ ೭೦ರಷ್ಟು ಕೃಷಿಯನ್ನು ಅವಲಂಬಿಸಿದೆ. ಕಾನಾಹೊಸಹಳ್ಳಿ ಪರಿಸರವು ಹೆಚ್ಚು ಮುಂಗಾರು ಮಳೆಯನ್ನು ಅವಲಂಬಿಸಿದೆ. ಮುಂಗಾರು ಹನಿ ಭೂಮಿಗೆ ಬಿದ್ದೊಡನೆ ಇಲ್ಲಿನ ಕೃಷಿಕ ವರ್ಗ ಚಟುವಟಿಕೆಯನ್ನು ಚುರುಕುಗೊಳಿಸುತ್ತಾರೆ. ಕೃಷಿಕಾರ್ಯವನ್ನು ಸೋಮವಾರ ಹೊರತುಪಡಿಸಿ(ಬಸವಣ್ಣ ದಿನ ಅಂದು ಎತ್ತುಗಳ ಮೇಲೆ ನೊಗ ಹೂಡುವುದಿಲ್ಲ) ಉಳಿದ ದಿನಗಳಲ್ಲಿ ಬಿತ್ತನೆ ಆರಂಭಿಸುತ್ತಾರೆ. ಬಿತ್ತುವ ಪೂರ್ವದಲ್ಲಿ ಹೊಲದಲ್ಲಿರುವ ದೈವಗಳಾದ ಬಸವಣ್ಣ, ಆಂಜನೇಯ, ನಾಗಪ್ಪ, ಗುಂಡುಬರಮಪ್ಪ, ಸ್ತ್ರೀದೇವತೆಗಳಿಗೆ ಉಗ್ಗಿ ಅಥವಾ ಬೆಲ್ಲಮಂಡಕ್ಕಿ ನೈವೇದ್ಯ ಮಾಡಿ ಬಂದಂತಹ ಎಲ್ಲರಿಗೂ ಹಂಚಿ ಭೂತಾಯಿಗೆ ನಮಿಸಿ ಬಿತ್ತನೆ ಶುರುಮಾಡುತ್ತಾರೆ. ಇದು ಸಾಮಾನ್ಯವಾಗಿ ಕಾನಾಹೊಸಹಳ್ಳಿ ಪರಿಸರದಲ್ಲಿ ಕಂಡುಬರುವ ಕೃಷಿ ಆಚರಣೆಯಾಗಿದೆ.

## ಹಬ್ಬಗಳು

ನಂಬಿಕೆ ಮತ್ತು ಸಂಪ್ರದಾಯಗಳ ಕ್ರಿಯಾ ರೂಪಗಳೇ ಈ ಹಬ್ಬಗಳು. ಅವು ಬೇರು ಮಟ್ಟದಲ್ಲಿ ಅವತರಿಸಿ ನಿಸರ್ಗ ಆರಾಧನೆಯಲ್ಲಿ ಪಸರಿಸಿವೆ. ಅವು ಕೃಷಿ ಸಂಸ್ಕೃತಿಯಲ್ಲಿ ಸ್ಪಷ್ಟರೂಪವನ್ನು ಪಡೆದು ಕಾಲಾನಂತರದಲ್ಲಿ ವಿಕಾಸಗೊಳ್ಳುತ್ತಾ ಜಟಿಲವಾದದ್ದುಂಟು. ಪ್ರತಿಯೊಂದು ಯುಗದ ಜನರು ಆಯಾ ಕಾಲದ ಅಭಿರುಚಿ ಮನೋಧರ್ಮಗಳಿಗೆ ಅನುಗುಣವಾಗಿ ತಮ್ಮ ತಮ್ಮ ಕಲ್ಪನೆಗಳಿಗೆ ಅನುಸಾರವಾಗಿ ಅವುಗಳ ರೂಪ ಸ್ವರೂಪಗಳಲ್ಲಿ ಮಾರ್ಪಾಡುಗಳನ್ನು ಮಾಡಿಕೊಂಡಿದ್ದು ಹೊಸ ಹೊಸ ವಿಧಿ ನಿಷೇಧಗಳನ್ನು ಉಪಾಸನ ವಿಧಾನಗಳನ್ನು ಸೇರಿಸಿದ್ದುಂಟು. ನಿಸರ್ಗವನ್ನು ನಿಯಂತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನಗಳ ಫಲವಾಗಿ ಹಬ್ಬಗಳು ಹುಟ್ಟು ಪಡೆದವು. ಹೀಗಾಗಿ ಹಲವು ಸಂಪ್ರದಾಯಗಳ ಮೊತ್ತ ಹಬ್ಬವಾಗುತ್ತದೆ.[೧೧]

ನಾವು ವಾಸಿಸುವ ಈ ಪ್ರಂಪಚ ಧರ್ಮಕ್ಷೇತ್ರವೂ ಹೌದು, ಕರ್ಮಕ್ಷೇತ್ರವೂ ಹೌದು. ಅಲ್ಲಿ ವಾಸಿಸುವ ನಾವು ನಮ್ಮ ಒಳಿತಿಗಾಗಿ ಸುಖ ಸಂತೋಷಕ್ಕಾಗಿ ಬಾಳಿನಲ್ಲಿ ಬದಲಾವಣೆಗಾಗಿ ಸಾಧನೆಯಿಂದ ಸಿದ್ಧಿಯತ್ತ ಸಾಗುವುದಕ್ಕಾಗಿ ಸಮಾಜ ಸಂಘಟನೆಗಾಗಿ ಆತ್ಮೀಯರೊಡನೆ ಬೆರೆಯುವುದಕ್ಕಾಗಿ ಹಲವು ಹಬ್ಬ

ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದೇವೆ. ವ್ರತನಿಯಮಗಳನ್ನು ಎಲ್ಲ ದಿನಗಳಂದು ಆಚರಿಸಲು ಸಾಧ್ಯವಿಲ್ಲ. ಕೊನೆ ಪಕ್ಷ ಇಂತಹ ದಿನಗಳಲ್ಲಾದರೂ ಸ್ವಲ್ಪ ದೇಹದಂಡನೆ ಆತ್ಮಚಿಂತನೆ ಮಾಡಿದಾಗ ಅಲ್ಲೂ ಇಲ್ಲೂ ಸಲ್ಲುವವರಾಗಿ ಮಾನವ ಮಾಧವನಾದನು.[೧೨]

ಹಿಂದೂ ಸಂಪ್ರದಾಯದಲ್ಲಿ ಹಬ್ಬ ಹರಿದಿನಗಳಿಗೆ ವಿಶೇಷ ಪ್ರಾಶಸ್ತ್ಯವಿದೆ. ಹಬ್ಬಗಳ ಸಂಖ್ಯೆಯೂ ಕೂಡ ಉಳಿದೆಲ್ಲ ಧರ್ಮಗಳಿಗಿಂತ ಹೆಚ್ಚಿನ ಸಂಖ್ಯೆಯಲ್ಲಿವೆ. ಹಬ್ಬಗಳ ಆಚರಣೆ ಮೂಲಭೂತವಾಗಿ ಮನುಷ್ಯನ ಉಲ್ಲಾಸ ಹುಮ್ಮಸ್ಸನ್ನು ಬಹಿರಂಗವಾಗಿ ಅಭಿವ್ಯಕ್ತಿಸುವ ಒಂದು ಸಾಧನ. ಆ ಉಲ್ಲಾಸ ಹುಮ್ಮಸ್ಸಿಗೆ ದೈವಿ ಶಕ್ತಿ ಕಾರಣವಾಗಿದೆ ಎಂಬ ಭಾವನೆಯಿದೆ.[೧೩] ಹಬ್ಬದೊಂದಿಗೆ ದೇವರ ಸಮ್ಮಿನವಾಗಿರಲು ಕಾರಣ ಆದರೂ ಇಲ್ಲಿ ದೇವರ ಅಸ್ತಿತ್ವ ಕೇವಲ ಒಂದು ನಿಮಿತ್ತ ಅಷ್ಟೆ. ಸಂತೋಷವನ್ನು ವ್ಯಕ್ತಪಡಿಸುವುದಷ್ಟೆ ಮುಖ್ಯವಾದುದು.

ಹಿಂದೂ ಸಂಪ್ರದಾಯದಲ್ಲಿ ಅಸಂಖ್ಯಾತವಾದ ಹಬ್ಬಗಳು ಇರಲು ಮೂಲ ಕಾರಣ ಅಲ್ಲಿನ ಜಾತಿವ್ಯವಸ್ಥೆ. ಅಲ್ಲಿರುವ ಜಾತಿಗಳಿಗನುಗುಣವಾಗಿ ಬೇರೆ ಬೇರೆ ಹಬ್ಬಗಳ ಆಚರಣೆ ಜಾರಿಗೆ ಬಂದಿದೆ. ಒಂದು ಜಾತಿಗೆ ಒಂದು, ಎರಡು, ಕೆಲವೋ, ಹಲವೋ ಹಬ್ಬಗಳು, ಇವುಗಳ ಜೊತೆಗೆ ಎಲ್ಲರೂ ಆಚರಿಸುವ ಹಬ್ಬಗಳು, ಹೀಗೆ ಬಗೆ ಬಗೆಯ ಹಬ್ಬಗಳು ಹಿಂದೂ ಸಂಪ್ರದಾಯದಲ್ಲಿ ಆಚರಣೆಗೆ ಬಂದಿರಲು ಕಾರಣವಾಗಿದೆ. ಕಾನಾಹೊಸಹಳ್ಳಿಯ ಹಿಂದೂ ಧರ್ಮಿಯರು ಈ ಕೆಳಕಂಡ ಹಬ್ಬಗಳನ್ನು ಆಚರಿಸುತ್ತಾರೆ. ಅಂತಹವುಗಳ ಕೆಲವೊಂದು ಹಬ್ಬಗಳನ್ನು ಈ ಕೆಳಕಂಡಂತೆ ಸ್ಥೂಲವಾಗಿ ಪರಿಚಯವನ್ನು ಮಾಡಿಕೊಳ್ಳಬಹುದು.

### ಯುಗಾದಿ

ಯುಗಾದಿ ಹಬ್ಬವನ್ನು ಕುರಿತು ಕವಿ ಬೇಂದ್ರೆಯವರು ತಮ್ಮದೇಆದ ರೀತಿಯಲ್ಲಿ ಹಾಡನ್ನು ಹೇಳಿರುವುದನ್ನು ನಾವು ಕಾಣಬಹುದು. "ಯುಗ ಯುಗಾದಿ ಕಳೆದರು ಯುಗಾದಿ ಮರಳಿ ಬರುತಿದೆ ಹೊಸ ವರುಷಕೆ ಹೊಸ ಹರುಷವ ಹೊಸತು ಹೊಸತು ತರುತಿದೆ" ಎಂಬ ವಾಣಿಯಂತೆ ಹೊಸ ವರುಷವು ಹರ್ಷದಾಯಕವಾಗಲೆಂದು ಒಳ್ಳೆಯ ಇಚ್ಛೆಯಿಂದ ಎಲ್ಲರೂ ಸೇರಿ ಆಚರಿಸುವ ಹಬ್ಬವೇ ಯುಗಾದಿಯಾಗಿದೆ. 'ಯುಗ' ಅಂದರೆ 'ನೂತನ ವರ್ಷ'. 'ಆದಿ' ಎಂದರೆ ಆರಂಭ ಎಂದರ್ಥ.[೧೪] ನನ್ನ ಅಧ್ಯಯನ ಕ್ಷೇತ್ರದಲ್ಲಿ ಈ ಹಬ್ಬವನ್ನು ಪ್ರಮುಖವಾಗಿ ಮೂರು ದಿನಗಳವರೆಗೆ ಆಚರಿಸುತ್ತಾರೆ ಮೊದಲನೆಯ ದಿನ ಊರ ದೇವರ ಗುಡಿಗಳನ್ನು ಮನೆಗಳನ್ನು ತಳಿರು ತೋರಣಗಳಿಂದ ಸಿಂಗರಿಸಿ ಹಬ್ಬದ ದಿನ ಬೆಳಗಿನ ಹೊತ್ತಿಗೆ ಆಭ್ಯಂಜನ ಸ್ನಾನ ಮಾಡಿ ಹೊಸ ಬಟ್ಟೆ ಉಟ್ಟುಕೊಂಡು ದೇವರ ಗುಡಿಗೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಕಡ್ಲೆಹಿಟ್ಟು, ಬನ್ನಿ, ಗೋಡಂಬಿ, ಗೇರುಬೀಜ, ಶೇಂಗಾ ಬೀಜ, ಬೇವಿನ ಹೂ ಕೂಡಿಸಿ ಬೇವು ಬೆಲ್ಲ ತಯಾರಿಸಿ ಅದನ್ನು ಸೇವಿಸುವುದರ ಮೂಲಕ ಎಲ್ಲರೂ ಹೊಸ ವರ್ಷವನ್ನು ಸ್ವಾಗತಿಸುತ್ತಾರೆ. ಬಸಿದ ಶಾವಿಗೆ ಆ ದಿನದ ವಿಶೇಷ ತಿಂಡಿ. ಅದರಲ್ಲಿ ಬೇವು ಕೂಡಿಸಿ ಸಕ್ಕರೆ ಹಾಕಿ ಊಟವನ್ನು ಮಾಡುವರು. ಅದೇ ದಿನ ಮಧ್ಯಾಹ್ನ ಹುಡುಗರು ಲಗೋರಿ, ಚೆಂಡಿನ ಆಟ ಆಡುವುದು ಕಂಡುಬರುತ್ತದೆ. ಆದರೆ ಇತ್ತೀಚಿನ ದಿನಗಳಲ್ಲಿ ಅವು ಕಣ್ಮರೆಯಾಗಿರುವುದನ್ನು ಕಾಣಬಹುದಾಗಿದೆ. ದೊಡ್ಡವರು ಕಲ್ಲುಗಳನ್ನು ಎತ್ತುವುದು, ಸಾಹಸ ಆಟಗಳನ್ನು ಆಡುವುದು ಮಾಡುತ್ತಾರೆ. ಅದೇ ದಿನ ಸಂಜೆ ದೇವಸ್ಥಾನಗಳಿಗೆ ಮತ್ತು ಹಿರಿಯರ ಸಮಾಧಿಗಳಿಗೆ ಪೂಜೆ ಸಲ್ಲಿಸುತ್ತಾರೆ. ಎರಡನೇ ದಿನ ಊಟದ ವಿಶೇಷತೆ ಬಿಟ್ಟರೆ ಬೇರೇನೂ ಇಲ್ಲ. ಆ ದಿನ ಹೋಳಿಗೆ ಮತ್ತು ಕರಿಗಡಬು, ಕಡ್ಲೆಕಾಳು, ಪಲ್ಲೆಗಳನ್ನು ಮಾಡಿ ಕರಿದ ತಿಂಡಿಗಳನ್ನು ತಯಾರಿಸಿ ಊಟ ಮಾಡಿ ಮುಗಿಸುತ್ತಾರೆ. ಮೂರನೇ ದಿನ ಚಂದ್ರನ ದರ್ಶನವನ್ನು ಮಾಡುತ್ತಾ ಎಲ್ಲ ಹಿರಿಯರಿಗೆ ಕಿರಿಯರಿಗೆ ಪರಸ್ಪರ ಚಂದ್ರ ದರ್ಶನದ ಶುಭಾಶಯವನ್ನು ಕೋರಲಾಗುತ್ತದೆ.

## ಪಂಚಮಿ (ನಾಗರ ಪಂಚಮಿ)

ಪಂಚಮಿ (ನಾಗರ ಪಂಚಮಿ) ಹಬ್ಬವು ನಾಡಿಗೆ ದೊಡ್ಡದು. ಪಂಚಮಿ ಹಬ್ಬ ಉಳದೈತೆ ದಿನಯಾಕ ಅಣ್ಣ ಬರಲಿಲ್ಲ, ಯಾಕ ಕರೆಯಾಕ ಎಂಬ ಗೀತೆಗಳು ಪಂಚಮಿ ಹಬ್ಬದ ಪ್ರಾಮುಖ್ಯತೆಯನ್ನು ಸೂಚಿಸುತ್ತವೆ. ಇದು ಮುಖ್ಯವಾಗಿ ಹೆಣ್ಣುಮಕ್ಕಳ ಹಬ್ಬ ಈ ಹಬ್ಬಕ್ಕೆ ಲಗ್ನವಾಗಿ ಹೋಗಿರುವ ಹೆಣ್ಣುಮಕ್ಕಳೆಲ್ಲ ತವರಿಗೆ ಬರುತ್ತಾರೆ. ಆ ದಿನ ಹೆಣ್ಣುಮಕ್ಕಳು ಗಂಡುಮಕ್ಕಳು ಎರಕೊಂಡು, ಹೊಸಬಟ್ಟೆ ಧರಿಸುತ್ತಾರೆ. ಆ ದಿನ ವಿಶೇಷವಾಗಿ ತಯಾರಿಸಲಾದ ಶೇಂಗಾ ಉಂಡಿ, ಎಳ್ಳುಂಡಿ, ಕಾರದುಂಡಿ, ಕಡ್ಲೆಹಿಟ್ಟಿನುಂಡಿ, ಬೇಸನುಂಡಿ, ರವೆಉಂಡಿ, ಜೋಳದುಂಡಿ ಹೀಗೆ ಇನ್ನೂ ಬೇರೆ ಬೇರೆ ತರಹದ ಉಂಡಿಗಳನ್ನು ತೆಗೆದುಕೊಂಡು ಹೆಣ್ಣುಮಕ್ಕಳು ಹುತ್ತಕ್ಕೆ (ನಾಗಪ್ಪಗೆ) ನೈವೇದ್ಯ ಮತ್ತು ಹಾಲು ಎರೆಯಲು ಹೋಗುತ್ತಾರೆ.[೧೫] ಆ ದಿನ ಮಧ್ಯಾಹ್ನ ಅಕ್ಕಿ ಹುಗ್ಗಿ ಊಟವನ್ನು ಮಾಡುತ್ತಾರೆ. ಊಟವಾದ ನಂತರ ಜೋಕಾಲಿ ಆಡುವುದು, ಜೋಕಾಲಿಗಳನ್ನು ಮರಗಳಿಗೆ ಕಟ್ಟಿ ತೂಗಿ ಹಾಕಿ ಅದರ ಮೇಲೆ ವಿಶೇಷವಾಗಿ ಹೆಣ್ಣುಮಕ್ಕಳು ಆಟವನ್ನು ಆಡುವುದು ಕಂಡು ಬರುತ್ತದೆ. ಗಂಡು ಮಕ್ಕಳು ನಿಂಬೆಹಣ್ಣು ಎಸೆಯುವ ಆಟ, ಕಣ್ಣುಕಟ್ಟಿ ಮುಟ್ಟುವ ಆಟವನ್ನು ಆಡುವುದು ವಿಶೇಷ. ಮರುದಿನ ಅದೇ ನಾಗಪ್ಪನ ಹುತ್ತಕ್ಕೆ ಹೆಣ್ಣುಮಕ್ಕಳು ಬೆಲ್ಲದ ಹಾಲು ಹೊಯ್ಯುವುದು ವಿಶೇಷ. ಆ ದಿನ ಪಾಯಸದ ಊಟವನ್ನು ಮಾಡುತ್ತಾರೆ. ಈ ರೀತಿಯಾಗಿ ನಾಗರ ಪಂಚಮಿಯನ್ನು ಹಲವು ವಿಶೇಷತೆಗಳಿಂದ ಮಾಡುವುದು ಈ ಗ್ರಾಮದಲ್ಲಿ ಕಂಡುಬರುತ್ತವೆ.

## ಗಣೇಶ ಚೌತಿ

ಗಣೇಶ ಚೌತಿಯನ್ನು ಎಲ್ಲ ಹಿಂದೂ ಧರ್ಮಿಯರು ಸಡಗರದಿಂದ ಆಚರಿಸುತ್ತಾರೆ. ಈ ಪ್ರದೇಶದಲ್ಲಿ ಇದೊಂದು ದೊಡ್ಡ ಹಬ್ಬವಾಗಿದೆ. ಏಕೆಂದರೆ ಗೌರಿಗಣೇಶ ಹಬ್ಬವು ಭಾದ್ರಪದ ಶುದ್ಧ ಚತುರ್ಥಿಯ ದಿನವೇ ಈ ಹಬ್ಬದ ಆಚರಣೆಯನ್ನು ಮಾಡುತ್ತಾರೆ.[೧೬] ಈ ಹಬ್ಬವನ್ನು ಎಲ್ಲ ಜನಾಂಗದವರು ಮಾಡುತ್ತಾರೆ. ಈ ಹಬ್ಬವು ಮೂರು ದಿನ, ಐದು ದಿನ, ಒಂಬತ್ತು ದಿನಗಳವರೆಗೆ ಮತ್ತು ಹನ್ನೊಂದು ದಿನಗಳವರೆಗೆ ನಡೆಯುತ್ತದೆ. ಮೊದಲನೇ ದಿನ ಗಣೇಶನನ್ನು ತಂದ ದಿನ ಒಂದು ಬಟ್ಟಲಿನಲ್ಲಿ ಅಕ್ಕಿಯನ್ನು ತಂದು ಅದರ ಮೇಲೆ ಗೌರಿಯ ಮೂರ್ತಿಯನ್ನು ಇಟ್ಟು ಗಣೇಶನ ಪಕ್ಕದಲ್ಲಿಟ್ಟು ಪೂಜೆಯನ್ನು ಮಾಡುತ್ತಾರೆ. ಹೀಗೆ ಗಣೇಶನನ್ನು ಕೆಲವರು ಮೂರು ದಿನ, ಇನ್ನು ಕೆಲವರು ಐದು ದಿನ, ಒಂಬತ್ತು ದಿನಗಳವರೆಗೂ ಪೂಜೆಯನ್ನು ಮಾಡುತ್ತಾ ಪ್ರತಿದಿನ ಒಂದು ರೀತಿಯ ನೈವೇದ್ಯವನ್ನು ಅರ್ಪಿಸುವರು.

ಇದಾದ ಮೇಲೆ ಗಣೇಶನನ್ನು ನೀರಿಗೆ ಕಳಿಸುವ ದಿನದಂದು ಗಣೇಶನನ್ನು ಪುನಃ ಶೃಂಗಾರ ಮಾಡದೇ ಆತನನ್ನು ಬರಿಮೈಯಲೇ ಕೆರೆಗೆ, ನದಿಗೆ, ಬಾವಿಗೆ ಕಳಿಸುವುದು ಮತ್ತು ದಡಾಕ್ಷಿ(ಪಟಾಕಿ) ಸುಡುವುದು ಈ ರೀತಿಯ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಮತ್ತು ಊರವತಿಯಿಂದ ಒಂದು ಗಣೇಶನನ್ನು ಕೂಡಿಸಿ ಅದನ್ನು ಮೂರುದಿನ ಅಥವಾ ಐದುದಿನಕ್ಕೆ ಕಳುಹಿಸುತ್ತಾರೆ. ಅಲ್ಲದೇ ಆಯಾ ಸಮುದಾಯದ ಕಾಲೋನಿಗಳಲ್ಲಿ ಗಣೇಶನನ್ನು ಕೂಡಿಸಲಾಗುತ್ತದೆ. ಅಲ್ಲದೇ ಗಣೇಶನ ಪಕ್ಕದಲ್ಲಿ ಇಲಿಯೂ ಸಹ ಕಂಡುಬರುತ್ತದೆ. ಈ ರೀತಿಯಾಗಿ ಗಣೇಶ ಚತುರ್ಥಿಯನ್ನು ವಿಜೃಂಭಣೆಯಿಂದ ಆಚರಿಸಲಾಗುತ್ತದೆ.

## ದಸರ

ಆಶ್ವಯು ಮಾಸದ ಶುದ್ಧಪಾಡ್ಯಮಿಯಿಂದ ದಶಮಿಯವರೆಗಿನ ಹತ್ತು ದಿನಗಳು ಬಹು ಪ್ರಾಶಸ್ತ್ಯವಾದವುಗಳು. ಮೊದಲ ಒಂಬತ್ತು ದಿನಗಳನ್ನು ನವರಾತ್ರಿಯೆಂದು, ಹತ್ತನೇ ದಿನವನ್ನು ವಿಜಯ ದಶಮಿಯೆಂದು ಕರೆಯುವುದುಂಟು. ಶರದ್ ಋತುವಿನಲ್ಲಿ ಬರುವುದರಿಂದ ಶರನ್ನವರಾತ್ರಿಯೆಂದು ಹೇಳಲಾಗುತ್ತದೆ.[೧೭] ಶಕ್ತಿ ಪೂಜೆ ಬಹುಹಿಂದಿನಿಂದಲೂ ರೂಢಿಯಲ್ಲಿದೆ. ವೇದದಲ್ಲಿನ ದೇವಿಸೂಕ್ತ, ಶ್ರೀಸೂಕ್ತ ಮತ್ತು ಈ ಸೂಕ್ತಗಳು ವೇದಗಳ ಕಾಲದ ಶಕ್ತಿಪೂಜಾ ಪ್ರಮಾಣಕ್ಕೆ ಆಧಾರವಾಗಿದೆ. ಕೇನ, ತೈತ್ಯರೀಯ, ಶ್ವೇತಾಶ್ವತರ, ಉಪನಿಷತ್ತುಗಳಲ್ಲಿಯೂ ಶಕ್ತಿಪೂಜೆಯ ಸೂಕ್ತಗಳು ಇವೆ. ದೇವಿಭಾಗವತ, ಸಪ್ತಸತಿ, ಮತ್ತಿತರ ಪುರಾಣಗಳಲ್ಲಿ ದೇವಿ ಮಹಿಮೆಯ ಕಥೆ ವಿಸ್ತಾರವಾಗಿದೆ. ಈ ಹಬ್ಬ ಲೋಕಕಂಟಕನಿವಾರಣೆ ಮತ್ತು ಲೋಕಕಲ್ಯಾಣದ ಉದ್ದೇಶ ಹೊಂದಿರುವಂತೆ ದುಷ್ಟ ಸಂಹಾರದ ಸಂಕೇತವಾಗಿದೆ. ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಮಾತೃದೇವತೆ ಆರಾಧನೆಯನ್ನು ಕಾಣುತ್ತೇವೆ.

ಗ್ರಾಮೀಣ ಮಟ್ಟಗಳಲ್ಲಿ ಗ್ರಾಮದೇವತೆಯ ರೂಪದಲ್ಲಿ ಅನೇಕ ಆಚರಣೆ ಈ ವಿಜಯ ದಶಮಿಯೆಂದು ಕಂಡುಬರುತ್ತದೆ. ಹೆಚ್ಚು ಬುಡಕಟ್ಟಿನ ಸಮುದಾಯದವರೇ ಇರುವ ಈ ಪರಿಸರದಲ್ಲಿ ಬಲಿಪೂಜೆ ಹೆಚ್ಚಾಗಿ ಚಾಲ್ತಿಯಲ್ಲಿದೆ. ಇನ್ನು ಬೇರೆ ಸಮುದಾಯದ ಅಂದರೆ ವೀರಶೈವರು, ಆಚಾರ್ಯರು(ವಿಶ್ವಕರ್ಮ), ವೈಶ್ಯರು, ಬ್ರಾಹ್ಮಣರು, ಕ್ಷತ್ರಿಯರು ಒಂಬತ್ತುದಿನಗಳ ಕಾಲ ದೇವತಾಮೂರ್ತಿಗಳನ್ನು ಪ್ರತಿಷ್ಠಾಪಿಸಿ ಒಂಬತ್ತು ದಿನಗಳ ಕಾಲ ಕುಮಾರಿಕೆ, ತ್ರಿಮೂರ್ತಿ, ಕಲ್ಯಾಣಿ, ರೋಹಿಣಿ, ಕಾಳಿ, ಚಂಡಿಕೆ, ಶಾಂಭವಿ, ದುರ್ಗೆ ಮತ್ತು ಭದ್ರೆಯರನ್ನು ಒಂದೊಂದು ದಿನ ಒಬ್ಬೊಬ್ಬ ಸ್ತ್ರೀ ದೇವಿಯನ್ನು ಆರಾಧಿಸಿ ಸಕಲರೂಪದಲ್ಲಿ ದುರ್ಗೆಯನ್ನು ಕೂರಿಸಿ ಪುರಾಣ ಪ್ರವಾಚನ ಮಾಡಿದರೆ ಕೆಲವರು ನೇಮನಿತ್ತಗಳನ್ನು ಅನುಸರಿಸುತ್ತಾರೆ. ಬನ್ನಿಮರಕ್ಕೆ ಪ್ರಾತಃಕಾಲದಲ್ಲಿ ಸ್ತ್ರೀಯರು ಹೆಚ್ಚಾಗಿ ನಡೆದುಕೊಳ್ಳುವ ಆಚರಣೆ ಈ ಭಾಗದಲ್ಲಿ ರೂಢಿಯಲ್ಲಿದೆ. ವಿಜಯದಶಮಿಯಂದು ಬನ್ನಿ ಮುಡಿಯುವುದರ ಮೂಲಕ ಬನ್ನಿ ಕೊಟ್ಟು ಬಂಗಾರದಂಗೆ ಇರೋಣ ಎಂಬ ಆಶಯದೊಂದಿಗೆ ಸಂದೇಶವಿನಿಮಯ ಮಾಡುತ್ತಾರೆ. ಇದೇ ಹಬ್ಬದ ವಿಶೇಷ. ಈ ಭಾಗದ ಆಂಜನೇಯ, ಶಿವ, ವೀರಭದ್ರ, ಬಸವಣ್ಣ, ಕಾಳಿ, ದುರ್ಗೆಯನ್ನು ಪಲ್ಲಕ್ಕಿಹೊತ್ತು ಬನ್ನಿಮುಡಿಯುವ ಪದ್ಧತಿ ಈ ಭಾಗದಲ್ಲಿ ಕಂಡುಬರುತ್ತದೆ.

## ಗೌರಿಹುಣ್ಣಿಮೆ

ಈ ಹಬ್ಬವು ದೀಪಾವಳಿಯಾದ ೧೫ ಮತ್ತು ೨೦ ದಿನಗಳ ನಂತರದಲ್ಲಿ ಬರುತ್ತದೆ. ಈ ಗೌರಿಹುಣ್ಣಿಮೆ ದಿನ ಮಕ್ಕಳೆಲ್ಲ ಸಕ್ಕರೆ ಗೊಂಬೆಗಳನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಕೊಂಡು ಬಂದು ಮನೆ ಮನೆಗೆ ಆರತಿಯನ್ನು ಬೆಳಗುವಂತಹ ಒಂದು ವಿಶಿಷ್ಟ ಸಂಪ್ರದಾಯ ಈ ಪ್ರದೇಶದಲ್ಲಿ ಕಂಡುಬರುತ್ತದೆ. ಅಲ್ಲದೇ ಈ ಗೌರಿ ಹುಣ್ಣಿಮೆಯ ಹಬ್ಬದಲ್ಲಿ ಸಣ್ಣ ಗೌರಿಹುಣ್ಣಿಮೆ ಮತ್ತು ದೊಡ್ಡ ಗೌರಿಹುಣ್ಣಿಮೆ ಎಂದು ಎರಡು ತೆರನಾದ ಹಬ್ಬಗಳನ್ನು ಆಚರಿಸಲಾಗುತ್ತದೆ.[೧೮] ಸಣ್ಣ ಗೌರಿಹುಣ್ಣಿಮೆಯಲ್ಲಿ ಮೂರು ದಿನ ಗೌರಿಮಕ್ಕಳಾಗಿ ಸ್ಥಳೀಯ ಎಲ್ಲಾ ಹೆಣ್ಣು ಮಕ್ಕಳು ಸೇರಿ ಸಾಂಸ್ಕೃತಿಕ ಆಟಗಳನ್ನು ಆಡುವುದರ ಮುಖಾಂತರ ಸಂತೋಷದಿಂದ ಮೂರು ದಿನಗಳ ಕಾಲ ಕಳೆಯುವರು. ಅದೇ ರೀತಿ ದೊಡ್ಡ ಗೌರಿಹುಣ್ಣಿಮೆಯ ಹಬ್ಬದಲ್ಲಿಯೂ ಸಹ ಸ್ಥಳೀಯ ಎಲ್ಲ ಹೆಣ್ಣುಮಕ್ಕಳು ಐದು ದಿನಗಳ ಕಾಲ ಗೌರಿ ಪೂಜೆ ಮಾಡುವುದರ ಜೊತೆಗೆ ಅವರ ಸಾಂಸ್ಕೃತಿಕ ಆಟಗಳನ್ನು ಆಡಿ ಮನರಂಜನೆಯಿಂದ ಕಾಲ ಕಳೆಯುವರು.

## ಸಂಕ್ರಾಂತಿ

ಈ ಹಬ್ಬವನ್ನು ದೇಶದ ಬಹುಭಾಗದಲ್ಲಿ ಆಚರಿಸುತ್ತಾರಾದರೂ ಪ್ರಾದೇಶಿಕವಾಗಿಯೂ ಮೆರುಗನ್ನು ಪಡೆದುಕೊಂಡಿದೆ. ಅಂದರೆ ಆ ದಿನ ಊರಿನ ಜನರೆಲ್ಲರೂ ಎಳ್ಳು ಬೆಲ್ಲವನ್ನು ಸೇವಿಸುವುದರ ಮೂಲಕ ಸಂತೋಷವಾಗಿ ಇರೋಣ ಎಂದು ಅರಸುತ್ತಾರೆ. ಎಳ್ಳನ್ನು ಪರಸ್ಪರ ಒಬ್ಬರಿಗೊಬ್ಬರು ಹಂಚಿಕೊಳ್ಳುವುದರ ಮೂಲಕ ಕೆಟ್ಟದನ್ನು ಬಿಟ್ಟು ಒಳ್ಳೆಯದನ್ನು ಕಲಿಯೋಣ ಎಂಬ ಆಶಯದೊಂದಿಗೆ ವ್ಯಕ್ತಪಡಿಸುತ್ತಾರೆ. ಅಷ್ಟೆ ಅಲ್ಲದೇ ಆ ದಿನ ಜನರು ನದಿ, ಹೊಳೆಗೆ ಹೋಗುವರು ವಿಶೇಷವಾಗಿ ಇರುತ್ತಾರೆ. ಅಲ್ಲಿ ಜನರು ಸ್ನಾನವನ್ನು ಮುಗಿಸಿಕೊಂಡು ತಾವು ತಂದಿದ್ದ ಬುತ್ತಿಗಂಟನ್ನು ಬಿಚ್ಚಿಕೊಂಡು ಹೊಳೆಗೆ ಅಥವಾ ನದಿಗೆ ಪೂಜೆ ಮಾಡಿ ಊಟ ಮಾಡುವುದು ವಿಶೇಷ ಮತ್ತು ಪವಿತ್ರ ಕ್ಷೇತ್ರಗಳಿಗೆ ಭೇಟಿ ನೀಡಿ ದೇವರ ದರ್ಶನ ಪಡೆಯುವುದು ವಿಶೇಷವಾಗಿದೆ.

## ಮಹಾಶಿವರಾತ್ರಿ

ಮಾಘ ಬಹುಳ ಚತುರ್ದಶಿ ಶಿವರಾತ್ರಿ ದಿನ ಪ್ರಪಂಚಕ್ಕೆ ತಂದೆ ಎನಿಸಿದ ಶಿವನ ಆರಾಧನೆಗೆ ಪ್ರಾಶಸ್ತ್ಯೆ ಮುಹೂರ್ತ ಮಹಾಶಿವರಾತ್ರಿಯೆಂದು ನಡುರಾತ್ರಿ ಕೋಟಿ ಸೂರ್ಯ ಪ್ರಕಾಶನಾದ ಪರಶಿವನು ಶಿವಲಿಂಗದಿಂದ ಸ್ವಯಂಭೂವಾಗಿ ಉದ್ಭವಿಸಿದನೆಂದು ತಿಳಿದುಬರುತ್ತದೆ. ಆ ದಿನ ಅರುಣೋದಯಕ್ಕೆ ಮುಂಚೆ ಎದ್ದು ಮುಂಜಾನೆಯಿಂದ ಹಿಡಿದು ರಾತ್ರಿಪೂರ್ತಿ ಭಕ್ತರು ನಿದ್ರೆ ಮಾಡದೆ ಜಾಗರಣೆ ಮಾಡುತ್ತಾರೆ. ಕೆಲವರು ನೀರನ್ನು ಬಿಟ್ಟು ಬೇಯಿಸಿದ ಆಹಾರವನ್ನು ತಿನ್ನುವುದಿಲ್ಲ. ಅಂದು ಶಿವನ ದೇವಲಾಯಗಳಲ್ಲಿ ಅಭಿಷೇಕದೊಂದಿಗೆ ಶಿವನನ್ನು ನೆನೆಯುತ್ತಾರೆ. ಇಂತಹ ಆಚರಣೆಗಳಿಂದ ಆಯಸ್ಸು, ಆರೋಗ್ಯ, ಸುಖ ಸಂಪತ್ತುಗಳು ಲಭಿಸುತ್ತದೆ. ಶಿವರಾತ್ರಿಯಂದು ಅವನ ದರ್ಶನ ಮಾಡಿದರೆ ಪುಣ್ಯ ಪ್ರಾಪ್ತಿಯಾಗುತ್ತದೆ ಎಂಬ ನಂಬಿಕೆ ಅವರಲ್ಲಿದೆ. ಪ್ರಸ್ತುತ ಅಧ್ಯಯನ ಕೈಗೊಂಡಿರುವ ಪ್ರದೇಶದಲ್ಲಿ ಎಲ್ಲರೂ ಈ ಹಬ್ಬವನ್ನು ಆಚರಿಸುತ್ತಾರೆ. ಸಾಮಾನ್ಯವಾಗಿ ಬಿಲ್ವಪತ್ರೆ ಮರವನ್ನು ಹುಡುಕಿ ಬನ್ನಿಮರಕ್ಕೆ ಪೂಜೆಯನ್ನು ಮಾಡುತ್ತಾರೆ.

## ಹೋಳಿಗೆ ಅಮ್ಮ

ಜೂನ್ ತಿಂಗಳಿನಲ್ಲಿ ಊರಿನವರೆಲ್ಲರೂ ಸೇರಿ ಹೋಳಿಗೆ ಅಮ್ಮ ಮಾಡುತ್ತಾರೆ. ಈ ಭಾಗದಲ್ಲಿ ಅಮ್ಮನ ಮಾಡುತ್ತೇವೆ ಎಂಬ ನುಡಿಯಿದೆ. ಮಂಗಳವಾರದಂದು ಈ ಅಮ್ಮನನ್ನು ಮಾಡಲಾಗುತ್ತದೆ.[೯೯] ಒಂದೆರಡು ದಿನದ ಮುಂಚೆಯೇ ಸಾರು(ಕೂಗು) ಹಾಕಿದ ನಂತರ ಆಚರಣೆಗೆ ಬೇಕಾದ ಕುಡಿಕೆ, ಬಳೆಹೊತ್ತು ಕುಂಬಾರರು ಓಣಿ ಓಣಿಗೆ ಮತ್ತು ಸಂತೆಗಳಿಗೆ ಹೋಗಿ ಮಾರುತ್ತಾರೆ. ಹಾಗೆಯೇ ಅವಳಿಗೆ ಬೇಕಾದ ರವಿಕೆ, ಕಾಯಿ, ಒಂದು ರೂಪಾಯಿ ದಕ್ಷಿಣೆ ಜೋಡಿಸಿ ಮುಂಜಾನೆಯೇ ಸ್ವಚ್ಛ ಮಾಡಿ ಹೋಳಿಗೆ ತಯಾರು ಮಾಡಿ ತಂದ ಸಾಮಗ್ರಿಯನ್ನು ಸಾರಿಸಿದ(ತೊಳೆದ) ಒಂದು ಜಾಗದಲ್ಲಿ ಹೂವು, ಬೇವಿನ ತೊಪ್ಪಲು, ಅರಿಶಿಣ ಕುಂಕುಮ ಹಚ್ಚಿ ಕಾಯಿ ಹೊಡೆದು ಹೋಳಿಗೆಯ ಎಡೆ ಹಾಕಿ ಮನೆಮಂದಿಎಲ್ಲ ಅವಳಿಗೆ ನಮಸ್ಕಾರ ಮಾಡಿ ಯಾವುದೇ ರೋಗರುಜಿನ, ಆಪತ್ತು ಬಾರದೆ ದನಕರು ಮತ್ತು ಬೆಳೆಗಳು ಸಮೃದ್ಧಿಯಾಗಲಿ ಎಂದು ಅರಸಿಕೊಂಡು ಅವಳನ್ನು ಬಿಟ್ಟು ಬರುತ್ತಾರೆ. ಇದು ಪ್ರತಿಗ್ರಾಮಗಳಲ್ಲಿ ಸರ್ವೇ ಸಾಮಾನ್ಯವಾಗಿ ಕಂಡು ಬರುತ್ತದೆ. ಆದರೆ ಕಾನಾಹೊಸಹಳ್ಳಿಯ ತಾಲ್ಲೂಕು ಕೇಂದ್ರವಾದ ಕೂಡ್ಲಿಗಿಯಂತಹ ದೊಡ್ಡ ಪಟ್ಟಣದಲ್ಲಿ ವಿಶೇಷ ಕಳೆ ಇರುತ್ತದೆ. ಈ ಆಚರಣೆಯಲ್ಲಿ ಹೊರಗಿನವರಿಗೆ ಊಟಕ್ಕೆ ಕರೆಯುವುದಿಲ್ಲ. ಮಾಡಿದ ಅಡುಗೆ ಹೊರಗಡೆ ಕೊಡುವುದಿಲ್ಲ.

ವಿಶೇಷ ಎಂದರೆ ಕರ್ನಾಟಕದ ಯಾವುದೇ ಒಂದು ತಾಲ್ಲೂಕು ಕೇಂದ್ರ ಇಷ್ಟೊಂದು ದೊಡ್ಡ ಮಟ್ಟದಲ್ಲಿ ಊರಿಗೆ ಊರೇ ಆಚರಣೆ ಮಾಡುವುದು ಅಚ್ಚರಿಯಾಗಿದೆ.

## ಮೊಹರಂ

ಕಾನಾಹೊಸಹಳ್ಳಿ ಗ್ರಾಮದಲ್ಲಿ ಮೊಹರಂ ಹಬ್ಬವನ್ನು ಆಚರಿಸುವುದನ್ನು ಕಾಣಬಹುದು. ಇದನ್ನು ಹಿಂದೂಗಳು ಪೀರಲ ದೇವರ ಹಬ್ಬವನ್ನಾಗಿ ಆಚರಿಸುವರು. ಕಾನಾಹೊಸಹಳ್ಳಿ ಗ್ರಾಮದಲ್ಲಿ ಬಹಳ ವೈಭವದಿಂದ ಆಚರಿಸುವುದು ಕಂಡುಬರುತ್ತದೆ. ಇಲ್ಲಿ ಪೀರಲ ದೇವರ ಮಸೀದಿಗಳನ್ನು ಹೊನ್ನೂರಸ್ವಾಮಿ ಗುಡಿಯೆಂದು ಹಿಂದೂಗಳು ಭಾವಿಸಿರುವುದು ಕಂಡುಬರುತ್ತದೆ. ಹಿಂದೂ ಮುಸ್ಲಿಮರು ಮೊಹರಂ ದಿನದಂದು ಕಟ್ಟಿನ ನಿಯಮಗಳನ್ನು ಪಾಲಿಸುತ್ತಿರುವುದು ಗಮನಾರ್ಹ. ಅವರು ಹಬ್ಬದ ಆಚರಣೆಯ ಸಂದರ್ಭದಲ್ಲಿ ಮದ್ಯ-ಮಾಂಸವನ್ನು ತ್ಯಜಿಸುತ್ತಾರೆ. ಹೆಣ್ಣುಮಕ್ಕಳು ಹೂವು ಮುಡಿಯುವುದಿಲ್ಲ. ಬರಿಗಾಲಲ್ಲಿ ನಡೆಯುತ್ತಾರೆ. ಹಬ್ಬದ ದಿನದಂದು ಇವರು ತಮ್ಮ ಮನೆಗಳ ಬಾಗಿಲು ಮುಚ್ಚುವುದಿಲ್ಲ ಮತ್ತು ಅಂದು ವಿಶೇಷವಾಗಿ ಸಂತಾನ ಭಾಗ್ಯವಿಲ್ಲದವರಿಗೆ ಉಡಿ ತುಂಬುವ ಪದ್ಧತಿ ನಡೆಯುತ್ತದೆಯೆಂದು ತಿಳಿದುಬರುತ್ತದೆ.[೨೦] ಅದೇ ರೀತಿ ಕಾನಾಹೊಸಹಳ್ಳಿ ಸುತ್ತ ಮುತ್ತಲಿನ ಪರಿಸರದಲ್ಲಿಯೂ ಸಹ ಹಿಂದೂ-ಮುಸ್ಲಿಮರು ಮೊಹರಂ ಹಬ್ಬದ ಸಂದರ್ಭದಲ್ಲಿ ಕೆಲವು ನಿಯಮಗಳನ್ನು ಆಚರಿಸುತ್ತಾರೆ. ಇವರು ಹಬ್ಬದ ಕೊನೆಯ ದಿನ ಉಪವಾಸ ವ್ರತವನ್ನು ಕೈಗೊಳ್ಳುತ್ತಾರೆ.

ಕಾನಾಹೊಸಹಳ್ಳಿ ಗ್ರಾಮದಲ್ಲಿ ಒಂದು ಮಸೀದಿಯಿದ್ದು ಮೊಹರಂ ಹಬ್ಬದ ಸಂದರ್ಭದಲ್ಲಿ ಒಂದು ಅಲಾವಿ ಕುಣಿಯನ್ನು ತೆಗೆಯುವುದು ಪ್ರತಿವರ್ಷ ನವೆಂಬರ್ ತಿಂಗಳಲ್ಲಿ ನಡೆಯುವ ಮೊಹರಂ ಹಬ್ಬದ ದಿನ ಕಾಣಬಹುದು. ಹತ್ತು ದಿನಗಳ ಕಾಲ ಈ ಹಬ್ಬವನ್ನು ಇವರು ಆಚರಿಸುತ್ತಾರೆ. ಚಂದ್ರನ ದರ್ಶನ ಎಂಬ ಹಬ್ಬದ ಮೊದಲ ಕಾರ್ಯದ ನಂತರ ಅಲಾವಿ ಕುಣಿಗೆ ಗುದ್ದಲಿ ಹಾಕಿ ಪೂಜೆಯಿಂದ ಪ್ರಾರಂಭವಾಗುತ್ತದೆ. ಇದಾದ ನಾಲ್ಕನೇ ದಿನ ಪೆಟ್ಟಿಗೆಯಲ್ಲಿರುವ ಪಾಂಜಾ ಮೂರ್ತಿಗಳಿಗೆ ಮೌಲ್ಲಾಗಳು ಮಸೀದಿಯಲ್ಲಿ ನೈವೇದ್ಯೆಯಿಟ್ಟು ಪೂಜೆ ಮಾಡುತ್ತಾರೆ. ಸರಗಸ್ತಿ ಎಂಬ ಆಚರಣೆಯನ್ನು ಏಳನೇ ದಿನದಂದು ಅಂದರೆ ಹಸೇನ-ಹುಸೇನ ಎಂಬ ಎರಡು ದೇವರುಗಳನ್ನು ಮಸೀದಿಯಲ್ಲಿ ಕೂರಿಸುತ್ತಾರೆ. ಕೆಂಡಾರ್ಚನೆಯ ಸೇವೆಯನ್ನು ಮಾಡುವುದು ಮೊಹರಂ ಹಬ್ಬದ ವಿಶೇಷ. ಇದನ್ನು ಹಬ್ಬದ ಒಂಬತ್ತನೆಯ ದಿನ ರಾತ್ರಿ ಅಲಾಯಿ ಕುಣಿಗೆ ಕಟ್ಟಿಗೆಗಳನ್ನು ಹಾಕಿ ಬೆಂಕಿಹಚ್ಚಿ ಕೆಂಡವನ್ನು ಸಿದ್ಧಪಡಿಸುತ್ತಾರೆ ಕುಣಿಗೆ ಪೂಜೆ ಮಾಡಿ ಕೆಂಡಹಾಯುವ ಹರಕೆಗಳನ್ನು ಭಕ್ತರು ಈಡೇರಿಸುತ್ತಾರೆ. ನೃತ್ಯಕಲಾವಿದರು ಅಥವಾ ವೇಷಧಾರಿಗಳು ಕುಣಿಯ ಸುತ್ತ ಇಡೀ ರಾತ್ರಿ ನೃತ್ಯ ಮಾಡುತ್ತಾರೆ. ಈ ನೃತ್ಯವನ್ನು ಮೊಹರಂ ಕುಣಿತವೆಂದು ಕರೆಯುತ್ತಾರೆ. ಈ ಕುಣಿತದಲ್ಲಿ ಕಾನಾಹೊಸಹಳ್ಳಿ ಗ್ರಾಮದ ಜನರು ಮತ್ತು ಸುತ್ತಮುತ್ತಲಿನ ಗ್ರಾಮದ ಜನರು ಭಾಗವಹಿಸುತ್ತಾರೆ.

## ಮೊಹರಂ ಕುಣಿತ

ನೃತ್ಯಕಲಾವಿದರು ವಿವಿಧ ವೇಷಗಳನ್ನು ಧರಿಸಿ ನೃತ್ಯ ಮಾಡುವುದು ಮೊಹರಂ ವಿಶೇಷ. ಈ ನೃತ್ಯವನ್ನು ಹಾಡಿನ ಕುಣಿತ ಮತ್ತು ಹಲಗೆಯ ಕುಣಿತವೆಂದು ಎರಡು ಪ್ರಕಾರಗಳಲ್ಲಿ ವಿಭಾಗಿಸುವುದು ಕಂಡುಬರುತ್ತದೆ.[೨೧] ಅಂದರೆ ಹಾಡಿಗೆ ತಕ್ಕಂತೆ ಅಥವಾ ಹಲಗೆಯ ನಾದಕ್ಕೆ ತಕ್ಕಂತೆ ಹೆಜ್ಜೆಯ ಹಾಕುತ್ತ ಕುಣಿಯುವುದು ಗ್ರಾಮದಲ್ಲಿ ಹಲಗೆಯ ಸದ್ದಿಗೆ ಕುಣಿಯುವ ಹುಲಿ, ಅಳ್ಳೊಳ್ಳಿ, ಬವ್ವಾ ವೇಷಧಾರಿಗಳು ಮೊಹರಂನಲ್ಲಿ ವಿಶೇಷವಾಗಿ ಕಂಡುಬರುತ್ತಾರೆ. ಇವರು ಮುಖಕ್ಕೆ ಕಪ್ಪು ಮಸಿ, ಬಳಿದು ಸೊಂಟಕ್ಕೆ ಗೆಜ್ಜೆಸರ, ತಲೆಗೆ ಟೋಪಿ, ಕೈಯಲ್ಲಿ ಬಟ್ಟೆ

ಹಿಡಿದು ಹಲಗೆ ಸದ್ದಿಗೆ ತಕ್ಕಂತೆ ಕುಣಿಯುತ್ತಾರೆ. ಇಂತಹ ವೇಷಧಾರಿಗಳು ಐದು ದಿನಗಳ ಕಾಲ ಬೆಳಗ್ಗೆಯಿಂದ ಸಂಜೆಯವರೆಗೆ ಮನೆ-ಮನೆಗೆ ತೆರಳಿ ಕುಣಿದು ಅವರಿಂದ ಕಾಣಿಕೆ ಪಡೆಯುವುದು ವಾಡಿಕೆ. ಇದೇ ರೀತಿ ಕಾನಾಹೊಸಹಳ್ಳಿ ಒಳಗೊಂಡಂತೆ ಸುತ್ತಮುತ್ತಲಿನ ಪ್ರದೇಶದಲ್ಲಿ ಸಮವಸ್ತ್ರ ಧರಿಸಿದ ಯುವಕರು ಕೈಯಲ್ಲಿ ಗದೆ, ಛತ್ರಿ, ಕೊರಳಲ್ಲಿ ಹಾರ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ತಮಟೆ ಅಥವಾ ಹಲಗೆಯ ಸದ್ದಿಗೆ ತಕ್ಕಂತೆ ಹೆಜ್ಜೆ ಹಾಕುವುದು ಕಂಡುಬರುತ್ತದೆ. ಇವರ ಕುಣಿತವು ಯುದ್ಧದಲ್ಲಿ ಇಮಾಂಹುಸೇನ್ ವಿರುದ್ಧ ಯಜೀದನ ಮತ್ತು ಸೈನಿಕರು ಗೆದ್ದ ನೆನಪಿಗಾಗಿ ಹಲಗೆಯ ನಾದಕ್ಕೆ ಹೆಜ್ಜೆಯನ್ನು ಹಾಕುತ್ತಾ ಕುಣಿಯುವ ದೃಶ್ಯವನ್ನು ನೆನಪಿಸುತ್ತದೆ. ಇದನ್ನು ಕೆಲವು ಪ್ರದೇಶಗಳಲ್ಲಿ ಇಮಾಂಹುಸೇನ ಮತ್ತು ಅವರ ಅನುಯಾಯಿಗಳಾದ ಹುತಾತ್ಮರ ಬದುಕನ್ನು ಕುರಿತು ಶ್ಲೋಕ ಗೀತೆಗಳನ್ನು ಕಟ್ಟಿ ಹಾಡುತ್ತಾರೆ.

## ನಾವನ್

ಸಂಕಷ್ಟಗಳಿಗೆ ಅಥವಾ ರೋಗಗಳಿಗೆ ಒಳಗಾಗಿರುವ ವ್ಯಕ್ತಿಗಳನ್ನು ಮೌಲ್ಲಾಗಳು ಮೊಹರಂ ಹಬ್ಬದ ಸಂದರ್ಭದಲ್ಲಿ ಎಲೆ, ಅಡಕೆ, ಬೂದಿ, ನಿಂಬೆಹಣ್ಣನ್ನು ಅವರ ತಲೆ ಮೇಲಿಟ್ಟು ನೀರನ್ನು ಹಾಕಿ ನವಿಲುಗರಿಗಳಿಂದ ತಲೆ ಸವರಿ ಆಶೀರ್ವಾದ ಮಾಡುತ್ತಾರೆ ಇದನ್ನು ನಾವನ್ ಎಂದು ಕರೆಯುತ್ತಾರೆ. ಅನೇಕ ಜನರು ಈ ಗ್ರಾಮದಲ್ಲಿ ಮೌಲ್ಲಾಗಳಿಂದ ನಾವನ್ ಪದ್ಧತಿಯನ್ನು ಆಚರಿಸಿಕೊಂಡು ಬಂದಿದ್ದು ತಿಳಿದಿದೆ. ಹಿಂದು-ಮುಸ್ಲಿಂ ಭಾವೈಕ್ಯತೆಯ ಪ್ರತೀಕವಾದ ಮೊಹರಂ ಹಬ್ಬವನ್ನು ಮುಸ್ಲಿಂರು ಹೊಸವರ್ಷವೆಂದು ಭಾವಿಸುವರು. ಮುಸ್ಲಿಂರು ೧೨ ತಿಂಗಳಗಳಲ್ಲಿ ಮೊಹರಂ ಮೊದಲನೆಯದು. ಈ ತಿಂಗಳ ಮೊದಲ ಹತ್ತು ದಿನ ಪವಿತ್ರ ಧರ್ಮರಕ್ಷಣೆಗಾಗಿ ಯುದ್ಧದಲ್ಲಿ ಮಡಿದವರ ಸ್ಮರಣಾರ್ಥವಾಗಿ ಪೀರಲಗಳನ್ನಾಗಿ ಮಸೀದಿಯಲ್ಲಿಟ್ಟು ಪೂಜಿಸುವುದು ಗಮನಾರ್ಹ. ಈ ಹಬ್ಬವನ್ನು ಕ್ರಿ.ಶ. ೮ನೇ ಶತಮಾನದಲ್ಲಿ ಮುಸ್ಲಿಮರು ಭಾರತದಲ್ಲಿ ಆಚರಿಸತೊಡಗಿರುವುದು ಸಾಹಿತ್ಯಿಕ ಕೃತಿಗಳಿಂದ ತಿಳಿದುಬರುತ್ತದೆ. ಮೊಹರಂ ಹಬ್ಬವನ್ನು ಮಾನವೀಯ ಮೌಲ್ಯ ಮತ್ತು ಸರ್ವಕಾಲಿಕ ಸತ್ಯದ ಹೋರಾಟದ ಪ್ರತೀಕವಾಗಿ ಇಂದಿಗೂ ಆಚರಿಸಿಕೊಂಡು ಬಂದಿದ್ದಾರೆ. ಹೀಗಾಗಿ ಈ ಹಬ್ಬದ ವಿಧಿ-ವಿಧಾನಗಳು ಊರಿಂದ ಊರಿಗೆ ಹಾಗೂ ಜನರಿಂದ ಜನಕ್ಕೆ ಭಿನ್ನವಾಗಿರುವುದನ್ನು ಕಾಣಬಹುದು.

## ಪಾಂಜಾ ವಿಸರ್ಜನೆ

ಮೊಹರಂ ಕೊನೆಯ ಹತ್ತನೇ ದಿನ ಇಮಾಂಹುಸೇನರು ವೀರಮರಣ ಹೊಂದಿದ ನೆನಪಿಗಾಗಿ ಅತ್ಯಂತ ವೈಭವದಿಂದ ಆಚರಿಸುವರು. ಅಂದು ಮಸೀದಿಯಲ್ಲಿ ಹಸೇನ-ಹುಸೇನರಿಗೆ ಅಭಿಷೇಕ, ನೈವೇದ್ಯ, ಮಂಗಳಾರತಿಯನ್ನು ಅರ್ಪಿಸುತ್ತಾರೆ. ಭಕ್ತರು ಇಷ್ಟಾರ್ಥ ಸಿದ್ಧಿಗಾಗಿ ಅಂದು ವಿವಿಧ ಬೇಡಿಕೆಯನ್ನು ದೇವರಲ್ಲಿ ಇಡುತ್ತಾರೆ. ಇವರ ಬೇಡಿಕೆಗಳು ಈಡೇರಿದರೆ ಮರುವರ್ಷ ಮೊಹರಂ ವೇಳೆ ಪಾಂಜಾಗಳನ್ನು ಮಾಡಿಸಿ ಮಸೀದಿಗೆ ನೀಡುತ್ತಾರೆ. ಅಲ್ಲದೇ ಇನ್ನು ಕೆಲವು ಭಕ್ತರು ಬಟ್ಟೆ, ಕೆಂಪುಸಕ್ಕರೆ, ಲೋಹದ ಕುದುರೆ, ಬೆಳ್ಳಿ ಛತ್ರಿ ಹಾಗೂ ಹೂವುಗಳನ್ನು ನೀಡುತ್ತಾರೆ. ಸಂಜೆ ಐದು ಘಂಟೆಗೆ ಹಸೇನ-ಹುಸೇನನ ಪ್ರತಿಮೆಗಳನ್ನು ಗ್ರಾಮದ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿದ ನಂತರ ನೀರಿನ ಹೊಂಡದಲ್ಲಿ ವಿಸರ್ಜಿಸುತ್ತಾರೆ. ನೀರಿನಲ್ಲಿ ತೊಳೆದು ಪೀರ್‌ಗಳನ್ನು ಕಟ್ಟಿ ಅದಕ್ಕೆ ಬಟ್ಟೆ ಸುತ್ತಿ ತಂದು ಮಸೀದಿಯಲ್ಲಿ ಇಡುವುದರೊಂದಿಗೆ ಮೊಹರಂ ಹಬ್ಬ ಕೊನೆಗೊಳ್ಳುವುದನ್ನು ಕಾಣಬಹುದು.

## ಮುಸ್ಲಿಂ ಹಬ್ಬಗಳು

ಈದ್–ಎ–ರಂಜಾನ್ ಎಂದು ಕರೆಯುವ ಇದು ಕುತುಬ್–ಎ–ರಂಜನ್ ಈದುಲ್ ಫಿತರ್ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾದ ರಂಜಾನ್ ಹಬ್ಬವು ಮುಸ್ಲಿಮರ ದೊಡ್ಡ ಹಬ್ಬ. ರಂಜಾನ್ ಮಾಸದ ಕೊನೆಯಲ್ಲಿ ಚಂದ್ರ ದರ್ಶನವಾದ ನಂತರ ಆಚರಿಸುತ್ತಾರೆ. ರಂಜಾನ್ ಒಂದು ತಿಂಗಳ ಪೂರ್ತಿ ದಾನ, ಉಪವಾಸ, ವ್ರತಾದಿಗಳಿಂದ ಆಚರಿಸಲ್ಪಡುವುದು. ಉಪವಾಸ ಇತರರ ದುಃಖ ಸುಖಗಳ ವಿವೇಚನೆಯನ್ನು ತರುತ್ತದೆ ಪ್ರತಿ ಮುಸ್ಲಿಮನು ಉಪವಾಸ ವ್ರತ ಆಚರಿಸುತ್ತಾರೆ. ಈ ದಿನಗಳಲ್ಲಿ ಬಡವ, ಬಲ್ಲಿದ, ಎಲ್ಲರೂ ಉಪವಾಸ ಮಾಡುತ್ತಾರೆ. ದೀನ ದಲಿತರಿಗೆ ಬಡವರಿಗೆ ದಾನ ಮಾಡುವುದು ಒಂದು ಪದ್ಧತಿಯಾಗಿದೆ. ರಂಜಾನ್ ತಿಂಗಳಲ್ಲಿ ಪವಿತ್ರ ಕುರಾನ್ ಮೊದಲುಗೊಂಡದ್ದು ಎಂದು ರಂಜಾನ್ ತಿಂಗಳ೨೬ ನೆಯ ದಿನ ಪವಿತ್ರ ರಾತ್ರಿ ಎಂದು ಆ ರಾತ್ರಿ 'ಲೈಲಿತ್ ಉಲ್ ಖದಖ್' ಅಥವಾ ಶಕ್ತಿ ರಾತ್ರಿಯೆಂದು ಕರೆಯುತ್ತಾರೆ. ಸ್ವರ್ಗದ ಬಾಗಿಲು ತೆರೆದಿರುತ್ತದೆಯೆಂದು ಮುಸ್ಲಿಮರು ನಂಬುತ್ತಾರೆ. ದಿನಕ್ಕೆ ಐದು ಬಾರಿಯಂತೆ ರಾತ್ರಿ ೮ ರಿಂದ ೧೦–೩೦ರವರೆಗೆ 'ತೆರಾವಿ ನಮಾಜ್' ಸಲ್ಲಿಸುತ್ತಾರೆ. ಖುರಾನಿನ ಸೂರಾಗಳನ್ನು ಓದಿ ಲೈಲಕ್ ಉಲ್ ಖದರನ್ ಕೊನೆಯಲ್ಲಿ ಮುಗಿಸುತ್ತಾರೆ. ಇದರಲ್ಲಿ ಸಾಮೂಹಿಕ ಪ್ರಾರ್ಥನೆ ಅಲ್ಲಾನೇ ಹೊರತು ಪೂಜೆಗೆ ಯಾರೂ ಅರ್ಹರಲ್ಲ ಎಂದು ನಂಬುತ್ತಾರೆ ಹಾಗೇ ಬಖರ್–ಈದ್ (ಈದ್–ಜಹಾ) ಜಿಲ್ ಹಜ್ ಮಾಸದ ೧೦ನೆಯ ದಿನ ಈ ಹಬ್ಬ ಆಚರಿಸುತ್ತಾರೆ. ಇಬ್ರಾಹಿಂ ತನ್ನ ಪುತ್ರನಾದ ಇಸ್ಮಾಯಿಲನನ್ನು ದೇವರು ಆಪೇಕ್ಷಿಸಿದ ಎಂಬುದಾಗಿ ತಲೆ ಕಡಿಯುತ್ತಾನೆ. ಆದರೆ ಚಮತ್ಕಾರ ಎಂಬಂತೆ ಮಗ ಅಲ್ಲಿಯೇ ನಿಂತಿರುತ್ತಾನೆ. ಇದನ್ನು ತ್ಯಾಗ, ನಿಷ್ಠೆ ಸವಿ ನೆನಪಿಗಾಗಿ ಆಚರಿಸುತ್ತಾರೆ.[೨೨]

ಈ ಎಲ್ಲ ಆಚರಣೆ ಕಾನಾಹೊಸಹಳ್ಳಿ ಗ್ರಾಮದಲ್ಲಿ ಅಷ್ಟಾಗಿ ಕಂಡುಬರದಿದ್ದರು ಇತ್ತೀಚಿನ ದಿನಮಾನಗಳಲ್ಲಿ ಮಸೀದಿ ಮದರಸಾಗಳ ನಿರ್ಮಾಣಗಳಿಂದಾಗಿ ಮೌಲ್ವಿಗಳ ಉಪದೇಶಗಳಿಂದಾಗಿ ದೇವರು ಧರ್ಮದ ಬಗ್ಗೆ ಆಸಕ್ತಿ ಹೊಂದಿ ಮುಸ್ಲಿಂ ಬಾಂಧವರು ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ. ಅವುಗಳಲ್ಲಿ ಕೂಡ್ಲಿಗಿ, ಕೊಟ್ಟೂರು ಪ್ರದೇಶಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬಂದರೆ ಇನ್ನು ಕಾನಾಹೊಸಹಳ್ಳಿಯಲ್ಲಿರುವ ಮುಸ್ಲಿಂ ಸಮುದಾಯಗಳು ಕೂಡ್ಲಿಗಿಗೆ ಬಂದು ಪ್ರಾರ್ಥನೆ ಸಲ್ಲಿಸುತ್ತಿದ್ದರು. ಆದರೆ ಇಂದು ಅಲ್ಲಲ್ಲಿ ಮಸೀದಿಗಳನ್ನು ಸರ್ಕಾರ ಮತ್ತು ಖಾಸಗಿಯವರು ನಿರ್ಮಿಸಿಕೊಟ್ಟು ಪ್ರಾರ್ಥನೆಗೆ ಅನುಕೂಲ ಮಾಡಿದ್ದಾರೆ. 'ಮೊಹರಂ' ಈ ಭಾಗದಲ್ಲಿ ಕಂಡುಬರುವ ಸರ್ವೆ ಸಾಮಾನ್ಯವಾದ ಹಬ್ಬವಾಗಿದೆ. ಇದೊಂದು ಸಂಭ್ರಮದ ಹಬ್ಬವಲ್ಲದಿದ್ದರೂ ಹಿಂದೂಗಳು ಮುಸ್ಲಿಮರೊಂದಿಗೆ ಬೆರೆತು ಶ್ರದ್ಧೆ ಭಕ್ತಿಗಳಿಂದ ಆಚರಿಸಿ ಮೂರು ದಿನಗಳ ಕಾಲ ಹುಲಿ, ಕರಡಿ ಇತರೆ ವೇಷ ಧರಿಸಿ ತಮ್ಮ ಹರಕೆ ಸಲ್ಲಿಸುವ ವಾಡಿಕೆ ಈ ಭಾಗದಲ್ಲಿ ಕಂಡುಬಂದಿದೆ.

## ಜಾತ್ರೆಗಳು

ಕೃಷಿ ಪ್ರಧಾನವಾದ ಬಹುಮುಖ ಸಂಸ್ಕೃತಿಯನ್ನು ಹೊಂದಿದ ಭಾರತ ದೇಶದಲ್ಲಿ ಜನರು ತಮ್ಮ ಬಿಡುವಿನ ಸಂದರ್ಭದಲ್ಲಿ ಗುಂಪುಗಳಾಗಿ ಸೇರಿ ತಮ್ಮ ಕಷ್ಟ ಸುಖಗಳನ್ನು ಹಂಚಿಕೊಳ್ಳುವುದು, ಇನ್ನೂ ಹಲವಾರು ಕೆಲಸ ಕಾರ್ಯಗಳ ಬದಲಾವಣೆ ಮಾಡಿಕೊಳ್ಳುವುದನ್ನು ಕಾಣುತ್ತೇವೆ. ಈ ಎಲ್ಲ ಕೆಲಸಗಳಿಗೆ ಜನಪದರು ಒಂದು ನಿರ್ದಿಷ್ಟವಾದ ಸ್ಥಳ ರೂಪಿಸಿಕೊಂಡು ಅವುಗಳನ್ನು ದೇವರ ಸ್ಥಳ, ಧಾರ್ಮಿಕ ಕ್ಷೇತ್ರಗಳೆಂದು ಕರೆದರು. ಭಾರತ ದೇಶವು ವಿಶಾಲವಾದುದರಿಂದ ಹಲವಾರು ಬುಡಕಟ್ಟುಗಳು ಹೊಂದಿರುವುದರ ಪ್ರಯುಕ್ತ ಪ್ರತಿಯೊಂದು ಗ್ರಾಮದಲ್ಲಿ ಒಂದಿಲ್ಲ ಒಂದು ದೇವರ ಗುಡಿ ಗುಂಡಾರ ಊರಹೊರೆಗಾಗಲೀ, ಮಧ್ಯದಲ್ಲಿ ಆಗಲೀ ಇರುವುದು ಕಂಡುಬರುತ್ತದೆ. ಈ ದೇವರುಗಳ ಆರಾಧನೆ, ಆಚರಣೆ, ಜಾತ್ರಾ–ಉತ್ಸವಗಳು ಒಂದು ನಿರ್ದಿಷ್ಟ ಕಾಲದಲ್ಲಿ

ನಿಯಮಿತವಾಗಿ ಊರ ಜನರು ನೆರೆಹೊರೆಯವರು ರಕ್ತ ಸಂಬಂಧಿಗಳು ಸೇರಿ ನೆರವೇರಿಸುವ ಆಚರಣೆಗೆ ಜಾತ್ರೆಯೆಂದು ಕರೆಯುತ್ತಾರೆ.[೨೩]

## ಜಾತ್ರೆ ಪದದ ನಿಷ್ಪತ್ತಿ

"ಜಾತ್ರೆ" ಎಂಬ ಪದ "ಯಾತ್ರೆ" ಎಂಬ ಸಂಸ್ಕೃತ ಪದದ ತದ್ಭವ ರೂಪವಾಗಿದೆ. ಜಾತ್ರೆ 'ಪರಿಸೆ' 'ಪರ್ಷೆ' ಈ ಪದಗಳು ಸಹ ಕನ್ನಡಕ್ಕೆ ಬಂದಿರುವ ಸಂಸ್ಕೃತ ಪದಗಳೇ ಆಗಿವೆ ಸಂಸ್ಕೃತದ 'ಪರಿಷತ್' ಪದ ಪಾರಿಭಾಷೆ ಪರ್ಶೆಯಾಗಿ ಕನ್ನಡದಲ್ಲಿ ಬಳಕೆಯಾಗುತ್ತದೆ. 'ಜಾತ್ರೆ' 'ಯಾತ್ರೆ' ಎಂಬ ಎರಡು ಪದಗಳ ನಡುವಿನ ಸಂಬಂಧದ ಬಗ್ಗೆ ವಿದ್ವಾಂಸರು ಚಿಂತಿಸಿರುವುದನ್ನು ಗಮನಿಸುವುದಾದರೆ ಯಾತ್ರಾ ಸ್ಥಾನಗಳೆಲ್ಲಾ ಜಾತ್ರೆಯ ಸ್ಥಳಗಳಾಗಲಿಕ್ಕಿಲ್ಲ. ಆದರೆ ಜಾತ್ರೆಯ ಸ್ಥಳಗಳೆಲ್ಲ ಸಾಮಾನ್ಯವಾಗಿ ಯಾತ್ರಾ ಸ್ಥಳಗಳಾಗಿರುತ್ತವೆ. ಇದಕ್ಕೆ ಸಮಂಜಸವಾಗಿ ಸಂಸ್ಕೃತದ ಒಂದು ಉಕ್ತವು ಹೀಗಿದೆ. **"ಯಾನೇನ ತ್ರಾಯತ್ ಇತಿಯಾತ್ರಾ"** ಇದರ ಅರ್ಥ ಪುಣ್ಯಕ್ಷೇತ್ರ ದರ್ಶನಕ್ಕೆ ಹೋಗುವವರ ರಕ್ಷೆಯೇ ಯಾತ್ರೆಯಾಗಿದೆ. ನಿಘಂಟುಗಳು ಸಹ ಜಾತ್ರೆ ಕುರಿತಾಗಿ ಪುಣ್ಯಕ್ಷೇತ್ರದ ದರ್ಶನ ಮಾಡುವ ಯಾತ್ರೆಯೆಂದೇ ಉಲ್ಲೇಖಿಸಿರುವುದು ಗಮನರ್ಹವಾದ ವಿಷಯವಾಗಿದೆ. ಏಕೆಂದರೆ ಯಾತ್ರೆ ಎಂದರೆ ಯಾವುದೇ ಕಾರ್ಯದಲ್ಲಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ (ಧಾರ್ಮಿಕ ಕ್ಷೇತ್ರ) ದರ್ಶನ ಪಡೆಯುವುದಾಗಿದೆ. ಇದಕ್ಕೆ ನಿದರ್ಶನವಾಗಿ ನಮ್ಮ ಪೂರ್ವಜರು ವರ್ಷಕೊಮ್ಮೆ ಇಂತಹ ಸ್ಥಳಗಳಿಗೆ ಒಂದು ನಿರ್ದಿಷ್ಟ ಸಮಯದಲ್ಲಿ ತಾವು ಬೇಡಿಕೊಂಡ ಹರಕೆಗಳನ್ನು ಸಲ್ಲಿಸಲು ಹೋಗುತ್ತಿದ್ದರು.

ಈ ಸ್ಥಳದಲ್ಲಿ ನೆರೆಯುವ ಜನಸಮೂಹಕ್ಕೆ ಜಾತ್ರೆ ಎಂದು ಕರೆಯುತ್ತಾರೆ. ಇಂದು ಇರುವಂತಹ ಸಾರಿಗೆ ಸೌಲಭ್ಯ ಹಾಗೂ ವಾಹನಗಳ ವ್ಯವಸ್ಥೆ ಅಂದಿರಲಿಲ್ಲ. ಇಂತಹ ಸಮಯದಲ್ಲಿ ಜನರು ಗುಂಪು ಗುಂಪಾಗಿ ಕಾಲ್ನಡಿಗೆಯಲ್ಲಿ, ಎತ್ತಿನ ಬಂಡಿಗಳಲ್ಲಿ ತಮ್ಮ ಅಗತ್ಯ ವಸ್ತುಗಳೊಂದಿಗೆ ಜಾತ್ರೆಗಳಿಗೆ ತೆರಳುತ್ತಿದ್ದರು. ಆದರೆ ಇಂದಿನ ಆಧುನಿಕ ಯುಗದ ಜಾತ್ರೆಗಳ ಸ್ವರೂಪ ಲಕ್ಷಣಗಳೇ ಬದಲಾಗಿವೆ. ವೈಜ್ಞಾನಿಕ ಯುಗದಲ್ಲೂ ಹಲವಾರು ಜಾತ್ರೆಗಳು ಪ್ರಾರಂಭವಾದರೆ ಜನರು ದೇವರ ಭಯ ಭಕ್ತಿಯಿಂದ ಭಜನಾ ಮಂಡಳಿಯೊಂದಿಗೆ ಪಾದಯಾತ್ರೆ ಮಾಡುವುದು ಶ್ರೇಯಸ್ಕರ ಎಂದು ಹಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಇದಕ್ಕೆ ಉದಾಹರಣೆಯಾಗಿ ಫಂಡರಾಪುರ ಜಾತ್ರೆ, ಶ್ರೀ ಶೈಲ ಮಲ್ಲಿಕಾರ್ಜುನ ಜಾತ್ರೆ ಇತ್ಯಾದಿ ಈ ಜಾತ್ರೆಗಳಿಗೆ ಜನರು ಸಹಸ್ರಾರು ಸಂಖ್ಯೆಯಲ್ಲಿ ಪಾದಯಾತ್ರೆಗೈದರೆ ಹಳ್ಳಿಗಳಲ್ಲಿ ಜರುಗುವಂತಹ ಜಾತ್ರೆಗಳಿಗೆ ನೆರೆಹೊರೆಯವರ ಹಳ್ಳಿಗಳಿಂದ ಜನರು ತಮ್ಮ ಹರಕೆಯ 'ಕುರುಹು' ಎಂದು ಭಾವಿಸಿ ಇನ್ನು ನಡೆದುಕೊಂಡು ಹೋಗುವ ಪದ್ಧತಿ ಹಲವಾರು ಜಾತ್ರೆಗಳಲ್ಲಿ ಕಂಡುಬರುತ್ತದೆ.[೨೪]

## ಜಾತ್ರೆಗಳ ಉಗಮ

ಜ್ಞಾನದಿಂದಲೂ, ಊಹೆ ಮತ್ತು ಕಲ್ಪನೆಗಳಿಂದಲೂ ಕುರಿತು ಬಹುಮಟ್ಟಿಗೆ ಹೇಳಲು ಪ್ರಯತ್ನ ಪಡಬಹುದಾಗಿದೆ. ಪಾಶ್ಚಿಮಾತ್ಯರಲ್ಲಿ feirae ಎಂಬ ಲ್ಯಾಟಿನ ಶಬ್ದದ ತದ್ಭವ fair ಎಂದು ಪರಿವರ್ತನೆಗೊಂಡು ವ್ಯಾಪಾರ ಕೇಂದ್ರಗಳನ್ನಾಗಿ ಜನರು ಸೇರಿ ತಮ್ಮ ವಹಿವಾಟುಗಳನ್ನು ಸಾದರಪಡಿಸಿಕೊಳ್ಳುತ್ತಿದ್ದರು. ಇವು ವರ್ಷದ ನಿರ್ದಿಷ್ಟ ಕಾಲಾವಧಿಯಲ್ಲಿ ಜರುಗುವುದು ಕಂಡು ಪಾಶ್ಚಿಮಾತ್ಯ ಇತಿಹಾಸಕಾರರು ಇವುಗಳಿಗೆ ತಾತ್ಕಾಲಿಕ ಮಾರುಕಟ್ಟೆಗಳೆಂದು ವ್ಯಾಖ್ಯಾನಿಸಿದ್ದಾರೆ. ಮುಂದೆ ಅದೊಂದು ಧಾರ್ಮಿಕ ಸಂಪ್ರದಾಯವಾಗಿ ಬೆಳೆಯದೇ ಆರ್ಥಿಕ ಚಟುವಟಿಕೆಯಾಗಿ ಬೆಳೆಯಿತು. ಇಂತಹ

ಸಂಪ್ರದಾಯಗಳು ಮಂದಗತಿಯಲ್ಲಿ ಸಾಗಿ ಬೆಳೆದು ಮುಂದೆ ಜಾತ್ರೆಯ ರೂಪ ತಾಳಿತು. ಪಾಶ್ಚಿಮಾತ್ಯರು ಜಾತ್ರೆಗಳ ಉಗಮದ ಬಗ್ಗೆ ಉಲ್ಲೇಖಿಸಿದರೆ ಭಾರತೀಯರಿಗೆ ಧರ್ಮವೇ ಮೂಲ ಪ್ರೇರಣೆ ಎನ್ನುವುದು ಸರಿಯಾದೀತು. ಇದರ ಹಿನ್ನೆಲೆಯಾಗಿ ಭಾರತೀಯ ಸಂಸ್ಕೃತಿ ಬೆಳೆದು ಬಂದ ಪರಂಪರೆ, ಇಲ್ಲಿ ವಾಸಿಸುವ ಜನ ಇವರ ಬದುಕಿನ ವೈಶಿಷ್ಟಗಳ ಆಧಾರದ ಮೇಲೆ ವಿದ್ವಾಂಸರು ಜಾತ್ರೆಗಳ ಉಗಮಕ್ಕೆ ತಮ್ಮದೆಆದ ಹೇಳಿಕೆಗಳನ್ನು ನೀಡಿದ್ದಾರೆ.[೨೫]

ಶಿವಾನಂದ ಗುಬ್ಬಣ್ಣನವರ ಪ್ರಕಾರ ಮಾನವ ಪ್ರಥಮ ಹಂತದಲ್ಲಿ ಮಂಗನಂತಿದ್ದು ಕಾಲ ಬದಲಾದಂತೆ ಸಮಾಜ ವಿಕಾಸಗೊಂಡಂತೆ ಅವನಲ್ಲಿ ವಿಚಾರ ಮತ್ತು ತಿಳಿವಳಿಕೆಗಳು ಬರತೊಡಗಿದವು. ತನ್ನ ಹೊಟ್ಟೆಪಾಡಿಗಾಗಿ ಬೇಟೆ ಆಡುವುದನ್ನು ಶುರುಮಾಡಿದ. ಅಲೆಮಾರಿ ಜೀವನವನ್ನು ಬಿಟ್ಟು ಬಿಡಾರಹಾಕಿ ನೆಲಸತೊಡಗಿದ. ಭೂಮಿಯಲ್ಲಿ ಬೆಳೆಗಳನ್ನು ಬೆಳೆಯತೊಡಗಿದನು. ಇಂತಹ ಸಮಯದಲ್ಲಿ ಪ್ರಕೃತಿಯಲ್ಲಿ ಗಾಳಿ, ಮಳೆ, ಚಳಿ, ಬಿಸಿಲು, ಗುಡುಗು, ಮಿಂಚು, ಸಿಡಿಲು, ಭೂಕಂಪ, ಬೆಂಕಿ, ಬಿರುಗಾಳಿ, ಹುಟ್ಟು ಸಾವಿನ ಪ್ರವಾಹ ಮುಂತಾದ ಅದ್ಭುತ ಕಾರ್ಯಗಳ ಕಾರಣವನ್ನು ಕಂಡಹಿಡಿಯುವುದು ಆತನಬುದ್ಧಿಶಕ್ತಿಗೆ ನಿಲುಕಲಿಲ್ಲ. ಇದನ್ನೆಲ್ಲ ಮಾಡುವವನು ಕಣ್ಣಿಗೆ ಕಾಣದಿದ್ದಾಗ ಅವನನ್ನೆ ದೇವರೆಂದು ನಂಬಿ ತಮಗೆ ಉಂಟಾದ ತೊಂದರೆ ಸಮಯದಲ್ಲಿ ಪೂಜಿಸುತ್ತಿದ್ದರು. ಇನ್ನು ಹಲವು ಇಂತಹ ನಂಬಿಕೆಗಳು ಅವರಲ್ಲಿ ಸೃಷ್ಟಿಗೊಂಡು ಮುಂದೆ ಇವುಗಳ ಧಾರ್ಮಿಕ ಇತಿಮಿತಿಗಳ ಒಳಗೆ ಬೆಳೆದು ಹೆಮ್ಮರವಾಗಿ ಸಮಾಜದ ಸ್ಥಾಪನೆಗೆ ಸ್ವಲ್ಪಮಟ್ಟಿಗೆ ಧಕ್ಕೆಯನ್ನುಂಟುಮಾಡಿದವು. ಹೀಗೆ ಜಾತ್ರೆಗಳು ಧಾರ್ಮಿಕ ಹಿನ್ನೆಲೆಯಲ್ಲಿ ಹುಟ್ಟಿಕೊಂಡವು ಎಂಬುದು ಪ್ರಾಣಿಶಾಸ್ತ್ರಜ್ಞರಾದ ಶಿವಾನಂದ ಗುಬ್ಬಣ್ಣನವರ ಅಭಿಪ್ರಾಯವಾಗಿದೆ.

ದೇ.ಜ.ಗೌ.ಅವರು ವಿಮರ್ಶಾತ್ಮಕವಾಗಿ ಜಾತ್ರೆಗಳ ಬೆಳೆವಣಿಗೆಗಳ ಕುರಿತು ಪ್ರಾರಂಭದಲ್ಲಿ ಯಾತ್ರೆ ಅಥವಾ ಜಾತ್ರೆ ಸುಪ್ರಸಿದ್ಧ ತೀರ್ಥಕ್ಷೇತ್ರಗಳಲ್ಲಿ ನಡೆಯುತ್ತಿತ್ತೆಂದು ತೋರುತ್ತದೆ. ಪಾಪ ಪರಿಹಾರಕ್ಕಾಗಿ ದೇಶದ ಮೂಲೆ ಮೂಲೆಗಳಿಂದಲೂ ಜನ ಅಂತಹ ಕ್ಷೇತ್ರಗಳಲ್ಲಿ ಅಪಾರ ಸಂಖ್ಯೆಯಲ್ಲಿ ನೆರೆಯುತ್ತಿದ್ದರು. ಕಾಲಾಂತರದಲ್ಲಿ ಕೆಲವು ಹಳ್ಳಿಗಳಲ್ಲಿ ನಿಯತ ಅಥವಾ ಅನಿಯತ ಕಾಲಗಳಲ್ಲಿ ಅದ್ದೂರಿಯಿಂದ ಜರುಗುತ್ತಿದ್ದ ದೊಡ್ಡ ದೊಡ್ಡ ಹಬ್ಬಗಳಲ್ಲಿ ನೆಂಟರಿಷ್ಟರ ಜೊತೆಗೆ ಶ್ರದ್ಧಾವಂತ ಜನರು ಬರಲಾರಂಭಿಸಿದರು. ದೇವರು ಪ್ರಭಾವಶಾಲಿಯಾದರಂತೂ ಜನರ ಗದ್ದಲವೂ ಅಧಿಕವಾಗುತ್ತಿತ್ತು. ಒಂದು ದಿನ ಹಬ್ಬ ಮೂರು ದಿನಗಳಿಗೆ ಹೆಚ್ಚು ಹೆಚ್ಚುತ್ತಾ ಕುಣಿತ ಮರೆತಗಳು ಕೂಡಿಕೊಂಡು ಮದ್ದು ಪಟಾಕಿಗಳ ವೈಭವ ಆಕರ್ಷಕವಾಗಿದ್ದು, ಅಂಗಡಿ ಮುಂಗಟ್ಟುಗಳು ಜಮಾಯಿಸಿ ಜನ ಮರುಳಾಗಿ ಪರಿಶೆ ಸೇರಿದಾಗ ಅದು ಜಾತ್ರೆಯೆಂಬ ನಾಮಕರಣ ಪಡೆಯಿತು. ಕೊನೆಗೆ ರೈತರ ಜೀವನಾಡಿಯಂತಿರುವ ದನಗಳ ನೆರವಿನೊಂದಿಗೆ ಸಂಘಟನೆಗೊಂಡಾಗ ಆ ಪದದ ಅರ್ಥ ವಿಶಾಲವಾಯಿತು. ಧಾರ್ಮಿಕ ಸ್ವರೂಪದ ಹಬ್ಬ ಕಾಲಕ್ರಮೇಣ ಸಾಂಸ್ಕೃತಿಕ ವ್ಯಕ್ತಿತ್ವವನ್ನು ಪಡೆದು ಕೊನೆಗೆ ವಾಣಿಜ್ಯ ಮುಖವನ್ನು ರೂಪಿಸಿಕೊಂಡಾಗ ಜಾತ್ರೆಯಾಯಿತು.[೨೬]

## ಜಾತ್ರೆಗಳ ಮಹತ್ವ

ಜಾತ್ರೆಗಳು ಗ್ರಾಮೀಣ ಜನರ ಬದುಕಿನ ಒಂದು ಪ್ರಮುಖ ಅಂಗವಾಗಿವೆ. ವರ್ಷದ ನಿರ್ದಿಷ್ಟ ಸಮಯದಲ್ಲಿ ಜಾತ್ರೆ ಜರುಗುವುದರಿಂದ ಆ ಗ್ರಾಮದ ಜನರಲ್ಲದೇ ನೆರೆಯ ಹಳ್ಳಿಗಳಿಂದ ಬರುವಂತಹ ಜನರು ಇದರಲ್ಲಿ ಭಾಗವಹಿಸಿ ಹಲವಾರು ಪ್ರಯೋಜನಗಳನ್ನು ಪಡೆಯುವುದನ್ನು ಗಮನಿಸಬಹುದಾಗಿದೆ.

ಜಾತ್ರೆಗಳು ಆಯಾ ದೈವಭಕ್ತರನ್ನು ಅವಲಂಬಿಸಿ ಜರುಗುವುದರಿಂದ ಭಕ್ತರನ್ನಲ್ಲದೇ ಎಲ್ಲಾ ಧರ್ಮಿಯರನ್ನು ಒಂದು ಕಡೆ ಸೇರುವಂತೆ ಮಾಡುತ್ತದೆ. ಜನಪದರು ತಮಗೆ ಉದ್ಭವಿಸಿದ ಸಮಸ್ಯೆಗಳಿಂದ ಕ್ಷಾಮ, ಬರಗಾಲ, ಕಾಯಿಲೆ, ಮಳೆಯ ಅಭಾವದಿಂದ ಬಾವಿಗಳ ನೀರಿನ ಮಟ್ಟ ಕಡಿತಗೊಂಡಲ್ಲಿ ಇವುಗಳ ಪರಿಹಾರಕ್ಕಾಗಿ, ದೇವರ ಸನ್ನಿಧಿಯಲ್ಲಿ ಹರಕೆಗಳಲ್ಲಿ ಜನಪದರು ಹೊಂದಿದ ಒಲುಮೆಯ ಸಹಕಾರದಿಂದ ಜಾತ್ರೆಗಳು ಜರುಗುತ್ತವೆ. ಜಾತ್ರೆಗಳು ಧರ್ಮವನ್ನು ಜನಪ್ರಿಯ ಗೊಳಿಸುವುದರಿಂದಲ್ಲದೇ ಸಾರ್ವಜನಿಕ ಕ್ಷೇಮಾಭಿವೃದ್ಧಿಯನ್ನು ಉಂಟುಮಾಡುತ್ತವೆ. ಹಾಗೆಯೇ ಪ್ರಸ್ತುತ ಕಾನಾಹೊಸಹಳ್ಳಿ ಗ್ರಾಮದಲ್ಲಿ ನಡೆಯುವ ಜಾತ್ರೆಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

### ಮಾರಿಕಾಂಬ ದೇವಿಯ ಜಾತ್ರೆ

ಮುಂದಿನ ಸೋಮವಾರ ಚೌಕಿ ಮನೆ ನಿರ್ಮಾಣ ವಾಗುತ್ತದೆ. ಈ ಚೌಕಿಮನೆಯಲ್ಲಿ ಸೋಮವಾರ ಬೆಳಿಗ್ಗೆ ಇದರಲ್ಲಿ ಜಲ್ಲೆಮಾರಮ್ಮನನ್ನು ಕೂಡಿಸುತ್ತಾರೆ. ಮಂಗಳವಾರ ಮಾರಿಕಾಂಬ ದೇವಿಯು ಚೌಕಿಮನೆಗೆ ಕರೆತರುತ್ತಾರೆ. ಮಂಗಳವಾರ ಬೆಳ್ಳಿಗ್ಗೆ ಸಂಪ್ರದಾಯಗಳಂತೆ ಪಟ್ಟದ ಕೋಣನ ಬಲಿಯನ್ನು ಕೊಡಲಾಗುತ್ತದೆ. ಅಲ್ಲದೇ ಊರತುಂಬಾ ಬೆಳಗಿನ ಜಾವ ಸರಗವನ್ನು ಚೆಲ್ಲಲಾಗುತ್ತದೆ. ಈ ಸರಗ ಚೆಲ್ಲುವುದ ರಿಂದ ಊರಿಗೆ ಶಾಂತಿಯಾಗುತ್ತದೆ ಎನ್ನುವ ನಂಬಿಕೆಯಿದೆ. ಬುಧವಾರ ದಿನದಂದು ಬೇವು ಮತ್ತು ಬೇಟೆ. ಈ ದಿನದಂದು ಭಕ್ತರು ತಮ್ಮ ಹರಕೆಗಳನ್ನು ತಿರಿಸಿಕೊಳ್ಳಲು ಅಮ್ಮನ ಬೇವಿನ ಸೊಪ್ಪನ್ನು ಮೈಮೇಲೆ ಸುತ್ತಿಕೊಂಡು ತಮ್ಮ ಹರಕೆಗಳನ್ನು ತಿರಿಸಿಕೊಳ್ಳುತ್ತಾರೆ. ತದನಂತರ ಊರಿನ ಜನರು ತಮ್ಮ ತಮ್ಮ ಬೇಟೆಗಳನ್ನು ಕಡಿಯುತ್ತಾರೆ. ಕಾನಾಹೊಸಹಳ್ಳಿಯ ಅಕ್ಕ ಪಕ್ಕದ ಗ್ರಾಮದವರು ಈ ಜಾತ್ರೆಯ ಸಮಯದಲ್ಲಿ ಬಂದು ಪರುವಗಳನ್ನು ಹಾಕಿಕೊಳ್ಳುತ್ತಾರೆ.

### ಸಾರುವುದು

ಗ್ರಾಮದೇವತೆಯ ಹಬ್ಬವು ಸಾರುವಿಕೆಯಿಂದ ಆರಂಭವಾಗುವುದು 'ಸಾರಣಿ' ಎಂತಲೂ ಇದನ್ನು ಕರೆಯುವರು. ಗ್ರಾಮದೇವತೆಯ ಹಬ್ಬಕ್ಕೆ ಗ್ರಾಮದ ಜನರನ್ನು ಮಾನಸಿಕವಾಗಿ ಮತ್ತು ಆರ್ಥಿಕವಾಗಿ ಸಿದ್ಧಗೊಳಿಸುವ ಆರಂಭದ ಆಚರಣೆ ಇದಾಗಿದೆ. ಜನರಿಗೆ ಹಬ್ಬದ ಸೂಚನೆಯನ್ನು ಕೊಡುವುದರ ಜೊತೆಗೆ ಅವರು ಪಾಲಿಸಬೇಕಾದ ವಿಧಿ ನಿಷೇಧಗಳನ್ನು ಆಗ ತಿಳಿಸಲಾಗುವುದು. ಇದರಿಂದ ಮನೆಗೆ ಒಬ್ಬೊಬ್ಬರೂ ಒಂದು ಸಾಮೂಹಿಕ ಜವಾಬ್ದಾರಿಯನ್ನು ಹೊತ್ತು ಹಬ್ಬನಡೆಯಲು ಸುಲಭವಾಗುವುದು. ಊರಿನ ಮುಖಂಡರು, ಪೂಜಾರಿ ಮತ್ತು ಗ್ರಾಮಸ್ಥರು ದೇವಾಲಯದಲ್ಲಿ ಸೇರುವರು. "ಈ ಹೊತ್ತಿಗೆ ಇಪ್ಪತ್ತು ದಿನಕ್ಕೆ ಹಬ್ಬ ಮಾಡಬಹುದೇ" ಎಂದು ದೇವತೆಯನ್ನು ಕೇಳುವರು ಆಗ ದೇವತೆಯ ವಿಗ್ರಹದ ಬಲಭಾಗದಲ್ಲಿ ಹೂ ಬೀಳಬೇಕು ಆಗೆ ಬಿದ್ದಾಗ, ಸಾರುವ್ಯಯನನ್ನು ನೇಮಿಸುವರು. ದಿನಗಳನ್ನು ಹೇಳುವಾಗ ಊರಿನವರ ಅನುಕೂಲವೇ ಮುಖ್ಯವಾಗುತ್ತದೆ. ಎಂಟು, ಹದಿನೈದು, ಇಪ್ಪತ್ತು, ಮೂವತ್ತು ಹೀಗೆ ದಿನಗಳಲ್ಲಿ ವ್ಯತ್ಯಾಸವಾಗುತ್ತಾ ಹೋಗಬಹುದು. ಸಾರುವ ವ್ಯಕ್ತಿ ಕೆಳಜಾತಿಯಾಗಿರುತ್ತಾನೆ. ಅದರಲ್ಲೂ ಅಸ್ಪೃಶ್ಯ ಪಂಗಡಕ್ಕೆ ಸೇರಿದವನಾಗಿರುತ್ತಾನೆ. ಸಾರುವವನಿಗೆ ಪ್ರತಿಫಲವಾಗಿ ಹಣ ಅಥವಾ ಹೆಂಡವನ್ನು ಕೊಡುವ ಪದ್ಧತಿಯಿದೆ. ಆತ ಸಾರಿದ ದಿನದಿಂದ ಹಬ್ಬ ಆಗುವ ತನಕ ಮಡಿಯನ್ನು ಪಾಲಿಸಬೇಕಾಗುತ್ತದೆ. ತನ್ನ ಮನೆಯವರಿಂದ ಪ್ರತ್ಯೇಕವಾಗಿರಬೇಕಾಗುತ್ತದೆ. ನಿತ್ಯ ಸ್ನಾನ ಮಾಡಿ, ಶುಚಿಯಾದ ವಸ್ತ್ರಗಳನ್ನು ಧರಿಸಬೇಕಲ್ಲದೆ, ಮಾಂಸಹಾರ, ಲೈಂಗಿಕ ಸಂಪರ್ಕವನ್ನು ವರ್ಜಿಸಬೇಕಾಗುತ್ತದೆ. ಈ ಅವಧಿಯಲ್ಲಿ ಸಾಮಾಜಿಕವಾಗಿ ಕೆಳ ಅಂತಸ್ತಿನವನಾದ ಈತನಿಗೆ ಉತ್ತಮವಾದ ಸ್ಥಾನಮಾನ ದೊರಕುವುದು ಕಾಣಬಹುದು.

## ಹೊಳೆಗೆ ಹೋಗುವುದು

ಈ ಆಚರಣೆಯನ್ನು ದೇವರು ತರುವುದು, ಜಲ್ದಿ ಎಂಬ ಹೆಸರುಗಳಿಂದ ಕರೆಯುವರು. ದೇವರಿಗೆ ಸ್ನಾನ ಮಾಡಿಸುವುದು ಇಲ್ಲಿಯ ಮುಖ್ಯ ಆಚರಣೆ. ದೇವತೆಯನ್ನು ಹೊಳೆ ಅಥವಾ ಕೆರೆ, ಕಲ್ಯಾಣಿ ಇವೆರಡು ಇಲ್ಲದಿದ್ದ ಪಕ್ಷದಲ್ಲಿ ಊರಿನ ಬಾವಿಯ ಬಳಿ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ದೇವತೆಯ ವಿಗ್ರಹವನ್ನು ಶುಚಿಗೊಳಿಸಿ ಹೋಮ ಮಾಡಿಸಲಾಗುವುದು ಇದನ್ನು ಪುಣ್ಯೋಜನ, ಪುಣ್ಯಹ ಎಂದು ಕರೆಯುವರು.

## ಬಲಿ ಆಚರಣೆ

ಗ್ರಾಮದೇವತೆಯ ಹಬ್ಬ ಬಲಿಪ್ರಧಾನವಾದ ಆಚರಣೆ. ದೇವತೆಯನ್ನು ಮೆರೆಸುವಾಗ ಹೆಜ್ಜೆಗೊಂದು ಬಲಿಕೊಡುವ ಸಂಪ್ರದಾಯವಿದೆ. ಕೆಂಡ ಹಾಯುವ ಮುನ್ನ ಅಥವಾ ಸಿಡಿಯಾಗುವ ಮುನ್ನ ಕುರಿಗಳನ್ನು ಬಲಿಕೊಡುವ ಪದ್ಧತಿ ಸಾಮಾನ್ಯವಾಗಿದೆ. ಬಲಿ ಆಚರಣೆಯಲ್ಲಿ ಪ್ರಮುಖವಾದುದು ಕೋಣನ ಬಲಿ. ಇತ್ತೀಚಿಗೆ ಕೋಣನ ಬದಲಿಗೆ ಕುರಿಯನ್ನು ಬಲಿಕೊಡುತ್ತಾರೆ. ಕುರಿ ಅಥವಾ ಕೋಣವನ್ನು ಕಡಿಯುವವನ ಕೊರಳಿಗೆ ಹೂವಿನ ಹಾರವನ್ನು ಹಾಕಿರುತ್ತಾರೆ. ಕುರಿ ಅಥವಾ ಕೋಣಕ್ಕೂ ಹೂವು ಹಾಕಿ ನೀರು ಚುಮುಕಿಸುತ್ತಾರೆ. ಬಲಿಪಶು ತಲೆ ಒಂದರಿಂದ ನಂತರ ದೈವದ ಅಪ್ಪಣೆಯಾಯಿತು ಎಂದು ಕಡಿಯುತ್ತಾರೆ.

## ಹುಲುಸು (ರಕ್ತಚರಗ) ಚೆಲ್ಲುವುದು

ಗ್ರಾಮದೇವತೆಗಳ ಜಾತ್ರೆಗಳಲ್ಲಿ ಅತ್ಯಂತ ಮಹತ್ವ ಮತ್ತು ಅಂತಿಮ ವಿಧಿಕ್ರಿಯೆ ಚರಗ ಚೆಲ್ಲುವುದು. ಹೊಲೆಯ (ಹರಿಜನ,ಮಾದಿಗ) ಸಮುದಾಯದ ವ್ಯಕ್ತಿ, ಆಚರಣೆಯಲ್ಲಿ ಉನ್ನತ ಸ್ಥಾನದಲ್ಲಿರುತ್ತಾನೆ. ಇತನು ಕೋಣದ ರಕ್ತದ ಜೊತೆ ಬೆರೆತ ಅನ್ನವನ್ನು ಬೆತ್ತಲೆಯಾಗಿ ಗ್ರಾಮದ ಗುಡಿಯ ಸುತ್ತಾ ಹೊಲ-ಗದ್ದೇಗಳಿಗೆ ಹುಲುಸು ಚೆಲ್ಲುತ್ತಾ ಸಾಗುತ್ತಾನೆ. ಬೆತ್ತಲೆಯಾಗುವುದು ಹಾಗೂ ರಕ್ತ ಮಿಶ್ರಿತ ಆಹಾರ ಚೆಲ್ಲುವಿಕೆ ಬಲಿಯ ಸಂಕೇತವಾಗಿದೆ. ಇಲ್ಲಿಯೂ ಸಹ ಪುರುಷನ ಬಲಿಯಾಗುವಿಕೆಯಿದೆ. ಈತನ ಪತ್ನಿ ಬಿಳಿಸೀರೆ ಉಟ್ಟು ಆಚರಣೆ ಮುಗಿಯುವವರೆಗೂ ಮೂಗುತಿ ತಿರುಗಿಸುತ್ತಾ ಇರಬೇಕು. ಈ ವರ್ತನೆಗಳು ಹಿಂದೆ ನರಬಲಿ ಇತ್ತೆಂದು ಬಲಿಯಾದವನ ಪತ್ನಿ ವಿಧವೆಯಾಗುತ್ತಿದ್ದಳು ಎಂಬುವುದನ್ನು ಸಾಬೀತುಪಡಿಸುತ್ತದೆ. ಚರಗ ಚೆಲ್ಲುವಾಗ ಭೂತಗಳ ಕಾಟದಿಂದ ತೊಂದರೆಯಾಗಬಾರದೆಂದು ಮೇಕೆಮರಿಯನ್ನು ಬಲಿ ಕೊಡಲಾಗುತ್ತದೆ. ಈ ವ್ಯಕ್ತಿಗಳಿಗೆ ಕಟ್ಟುನಿಟ್ಟಿನ ಉಪವಾಸ ಕ್ರಮವಿರುತ್ತದೆ. ತನ್ನ ಗಂಡನಿಗೆ ತೊಂದರೆಯಾದರೆ ತಿರುಗಿಸಿದ ಮೂಗುತಿ ನಿಂತುಬಿಡುತ್ತದೆಂಬ ನಂಬಿಕೆಯಿದೆ. ಈ ರೀತಿ ಹುಲಿಸು ಚೆಲ್ಲವ ಸಮಯದಲ್ಲಿ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ತಂಬ್ರಹಳ್ಳಿಯಲ್ಲಿ ಹರಿಜನ ವ್ಯಕ್ತಿಯೊಬ್ಬ ಸತ್ತಿದ್ದಕ್ಕೆ ಅಂದಿನಿಂದ ಹುಲುಸು ಚೆಲ್ಲುವುದನ್ನು ನಿಲ್ಲಿಸಿದ್ದಾರೆ. ಕಠಿಣ ಉಪವಾಸ ಕ್ರಮ ಹಾಗೂ ಆಚರಣೆಯ ಬಗೆಗೆ ಹೊಂದಿದ ಭಯವೇ ವ್ಯಕ್ತಿಯ ಸಾವಿಗೆ ಕಾರಣವಾಗಲು ಸಾಧ್ಯವಿದೆ. ಮಾತೃದೇವತೆಗಳಲ್ಲಿ ಶಿಕ್ಷಕ, ರಕ್ಷಕ, ಗುಣಗಳೆರಡೂ ಇವೆ. ಇಂಥ ಪರಸ್ಪರ ವಿರೋಧಿ ಗುಣಹೊಂದಿರುವ ಶಕ್ತಿಯನ್ನು ಜನಪದರು ಒಪ್ಪಿಕೊಂಡಿದ್ದಾರೆ. ಅಲ್ಲದೆ ಆಕೆಗೆ ಮಾತೃಸ್ಥಾನ ಕಲ್ಪಿಸಿದ್ದಾರೆ. "ಸಾತ್ವಿಕ ತಾಮಸಗಳ ಸಂಯೋಜನೆಯಿಂದಲೇ ಬದುಕು ಗಟ್ಟಿಗೊಳ್ಳುವುದನ್ನು ಸಾಕೇತಿಸಲಿಕ್ಕಾಗಿ ಈ ಬಗೆಯ ಬಲಿ ಆಚರಣೆ ಬಂದಿರಬೇಕು." ಹುಲುಸು ಚೆಲ್ಲುವುದರಿಂದ ಉತ್ತಮ ಮಳೆ-ಬೆಳೆ ಸಮೃದ್ಧಿಯಾಗುವುದೆಂದು ನಂಬಿಕೆಯೇ ಈ ಆಚರಣೆಯ ಮುಂದುವರಿಕೆಗೆ ಕಾರಣವಾಗಿದೆ. ಹುಲುಸುನೊಂದಿಗೆ ಗ್ರಾಮದೇವತೆಯ ಸಂಚಾರವಾಗುತ್ತದೆ. ಆಗ ದೈವದ ಪಾದಸ್ಪರ್ಶದಿಂದ ಭೂಮಿ ಗಟ್ಟಿಗೊಂಡು ಫಲಸಮೃದ್ಧಿಯಾಗುವುದೆಂಬ ಆಶಯ ಜನಪದರದ್ದಾಗಿದೆ. ಗ್ರಾಮದ ಸುತ್ತ ಹುಲಿಸಿನ ರೂಪದಲ್ಲಿ ದೈವಶಕ್ತಿ ಇದೆಯೆಂದು ಪರಿಭಾವಿಸುತ್ತಾರೆ.

ಭಯ ಮುಕ್ತವಾದ ಕ್ಷೇಮವಲಯದಲ್ಲಿ ಇದ್ದೇವೆಂಬುದು ಅವರ ನಂಬಿಕೆ. ಸೂಕ್ತ ಮನಸ್ಸಿನಲ್ಲಿರುವ ಮಗುತನವು ಅಮ್ಮನನ್ನು ಆಶ್ರಯಿಸುವುದರ ಮೂಲಕ ತೃಪ್ತವಾಗಿ ಭಯನಿಗಿಸಿಕೊಳ್ಳುತ್ತದೆ. ಒಂದು ಗ್ರಾಮದವರೆಲ್ಲ ಇಂತಹ ಬಿಡುಗಡೆಯ ಭಾಗ್ಯವನ್ನು ಅಮ್ಮನನ್ನು ಆಶ್ರಯಿಸುವುದರ ಮೂಲಕ ಪಡೆಯುತ್ತಾರೆ. ಈ ರೀತಿಯಾಗಿ ಕಾನಾಹೊಸಹಳ್ಳಿ ಗ್ರಾಮ ದೇವತೆಯಾದಂತಹ ಮಾರಮ್ಮನ ಜಾತ್ರೆಯಲ್ಲಿ ಸಂಪ್ರದಾಯಬದ್ಧವಾಗಿ ರಕ್ತಚರಗ ಚೆಲ್ಲುವುದನ್ನು ಪ್ರಸ್ತುತ ದಿನಗಳಲ್ಲಿ ಕಂಡುಬರುತ್ತದೆ.

## ಗಾವು

ಗುರುವಾರ ಸಂಜೆ ಐದು ಘಂಟೆಗೆ ಹಿಂದಿನ ಸಂಪ್ರದಾಯದಂತೆ ಗಾವು ಸಿಗಿಯುವುದು ಸಹ ಒಂದು ವಿಶೇಷ ಸಂಪ್ರದಾಯವಾಗಿದ್ದು ಈ ಕಾರ್ಯಕ್ರಮದಲ್ಲಿ ಪೋತರಾಜರ ಪಾತ್ರ ಅತಿ ಮುಖ್ಯವಾಗಿದೆ. ಈ ಸಂಪ್ರದಾಯದ ಹಿನ್ನೆಲೆಯನ್ನು ನೋಡುವುದಾದರೆ ಈ ಕೆಳಕಂಡಂತೆ ಹೇಳಬಹುದಾಗಿದೆ. ಈ ಮೊದಲು ಶಿಷ್ಟ ಧರ್ಮಗಳ ವಿವರಗಳನ್ನು ಚರ್ಚಿಸಿದ ನಂತರ ಜನಪದ ನಂಬಿಕೆ ಮತ್ತು ಆಚರಣೆಗಳನ್ನು ಇಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಶಿಷ್ಟಕ್ಕಿಂತ ಭಿನ್ನವಾದ ಜನಸಾಮಾನ್ಯರು ಹಳ್ಳಿಗಾಡುಗಳಲ್ಲಿ ಆಚರಿಸುತ್ತಿದ್ದು ಮತ್ತು ಪೂಜಿಸುತ್ತಿದ್ದು ದೇವರು ಮತ್ತು ಅದಕ್ಕೆ ಸಂಬಂಧಪಟ್ಟ ಆಚರಣೆಗಳನ್ನು ಇಲ್ಲಿ ಪರಿಶೀಲಿಸಬಹುದು. ಈ ಪ್ರದೇಶದಲ್ಲಿ ಹಿಂದುಳಿದ ವರ್ಗದ ಜನರೇ ಹೆಚ್ಚಾಗಿರುವುದರಿಂದ ಇಲ್ಲಿ ಜನಪದ ಆಚರಣೆಗಳು ಕಂಡುಬರುವುದನ್ನು ನೋಡಬಹುದು. ಜನಪದ ದೇವರುಗಳಾದ ಮಲಿಯಮ್ಮ, ದುರ್ಗಮ್ಮ, ಮಾರಮ್ಮ ಇನ್ನೂ ಮೊದಲಾದ ದೇವರುಗಳನ್ನು ಹೆಸರಿಸಬಹುದು.

ಈ ಜನಪದ ದೇವತೆಗಳಿಗೆ ಕೋಣ, ಕುರಿ, ಮೇಕೆಗಳನ್ನು ಬಲಿ ಕೊಡುವ ಪದ್ಧತಿಯನ್ನು ಕಾಣಬಹುದು. ವರ್ಷಕ್ಕೆ ಒಂದು ಬಾರಿ ಅಥವಾ ಮೂರು, ಐದು ವರ್ಷಗಳಿಗೊಮ್ಮೆ ಹಬ್ಬ ಆಚರಿಸಿ ಪ್ರಾಣಿ ಬಲಿಯನ್ನು ನೀಡುತ್ತಾರೆ. ಮಾರಮ್ಮ ಜಾತ್ರೆಯಲ್ಲಿ ಕೋಣವನ್ನು ಕಡಿದ ನಂತರ ಗಾವು ಸಿಗಿಯುವ ಪದ್ಧತಿಯಿದೆ. ಇದು ಜಾತ್ರೆಯ ವಿಶೇಷ ಆಚರಣೆಗಳಲೊಂದಾಗಿದೆ. ಗಾವು ಜಿಗಿಯುವವರಿಗೆ ಪೋತರಾಜರು ಅಥವಾ ಹೋತರಾಜರು ಎಂದು ಕರೆಯುತ್ತಾರೆ. ಇವರು ಜಾತ್ರೆ ಕೊನೆಯ ದಿವಸ ಉರಿಮೆ, ತಮಟೆ, ವಾದ್ಯಗಳ ಸಮೇತ ಗಂಗೆ ಪೂಜೆ ಸ್ನಾನ ಮುಗಿಸಿಕೊಂಡು ದೇವಸ್ಥಾನಕ್ಕೆ ಒಂದು ವರ್ಷ ವಯಸ್ಸಿನ ಮೇಕೆಯನ್ನು ಹೆಗಲ ಮೇಲೆ ಹೊತ್ತು ತರುತಾರೆ. ಇವರ ಅಬ್ಬರ, ಕುಣಿತ ನೋಡಲು ಸಾವಿರಾರು ಜನ ಜಮಾಯಿಸಿರುತ್ತಾರೆ. ಪೋತರಾಜರು ಮರಿಹೋತವನ್ನು ಸುಮಾರು ಒಂದು ಎರಡು ಘಂಟೆಗಳ ಕಾಲ ಎತ್ತಿಕುಣಿಸಿ ಸುಸ್ತು ಮಾಡುತ್ತಾರೆ. ಹೀಗೆ ಮಾಡುತ್ತಾ ಎಲ್ಲರ ಗಮನ ಸೆಳೆಯುವಷ್ಟರಲ್ಲಿ ತಮಟೆ ಶಬ್ದ ತಾರಕಕ್ಕೆ ಏರುತ್ತದೆ. ಅಬ್ಬರದ ನಡುವೆ ಮೇಕೆಗೆ ಗಾಬರಿಯಿಂದ ಮೂರ್ಛೆ ಬಂದಂತಾಗುತ್ತದೆ ನಂತರ ಈ ಹೊತು ಮರಿಯನ್ನು ಪೂಜಿಸಿ ಮೇಕೆಯ ಹಿಂದಿನ ಕಾಲುಗಳನ್ನು ತನ್ನ ಕಾಲುಗಳ ಮಧ್ಯೆ ಸಿಕ್ಕಿಸಿ ಮುಂದಿನ ಕಾಲುಗಳನ್ನು ಹೆಗಳ ಮೇಲೆರಿಸಿ ಮೇಕೆಯ ಕುತ್ತಿಗೆಯನ್ನು ಪೋತರಾಜರು ಬಾಯಿಂದ ಕಚ್ಚಿ ಗಾಯಗೊಳಿಸಿ ಈ ಪುಟ್ಟ ಮೇಕೆಮರಿಯನ್ನು ಸಾಯಿಸಿಬಿಡುತ್ತಾನೆ. ಹೀಗೆ ಮಾಡುವಾಗ ಮೇಕೆಮರಿಯು ಅರಚಬಾರದಂತೆ. ಅರಿಚಿದರೆ ಈ ಗ್ರಾಮಕ್ಕೆ ವಿಘ್ನವಂತೆ ಎಂಬ ಇತ್ಯಾದಿ ನಂಬಿಕೆಗಳು ಇವೆ.

ಹೀಗೆ ಪೋತರಾಜನ ಹೋತು ಮರಿಯನ್ನು ಜಿಗಿಯುವ ವೇಳೆ ಸುತ್ತ ನೆರೆದವರು ಎಲ್ಲರೂ ಕೇಕೆ ಹಾಕುತ್ತಾ ತಮಟೆ ಬಾರಿಸುತ್ತಾ ಆತನನ್ನು ಹುರಿದುಂಬಿಸುತ್ತಾರೆ. ಗಾಯಗೊಳಿಸಿದ ಭಾಗವನ್ನು ದೇವರ ಸನ್ನಿಧಿಯಲ್ಲಿ ಮಾತ್ರ ಬಿಡುತ್ತಾರೆ. ಕಾನಾಹೊಸಹಳ್ಳಿ ಪ್ರದೇಶದಲ್ಲಿ ಜನಸಾಮಾನ್ಯರು ಅನೇಕ ಜನಪದ ಸ್ತ್ರೀ

ದೇವತೆಗಳನ್ನು ಪೂಜಿಸುತ್ತಿದ್ದರು ಎಂಬುದಕ್ಕೆ ಇಂದಿಗೂ ಆಚರಿಸಲ್ಪಡುತ್ತಿರುವ ಹಬ್ಬ ಹರಿದಿನ ಜಾತ್ರೆಗಳೇ ಸಾಕ್ಷಿ. ಇಂತಹ ಧಾರ್ಮಿಕ ವಿಧಿಗಳನ್ನು ನಮ್ಮ ಜನಪದರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಆಚರಿಸುತ್ತಿದ್ದರು ಎಂದು ಹೇಳಬಹುದು. ಇದು ಆ ದೇವತೆಯ ಬಗೆಗಿರುವ ಅಪಾರ ಭಕ್ತಿ ಹಾಗೂ ಕಲ್ಪನೆಯನ್ನು ಸ್ಪಷ್ಟಪಡಿಸುತ್ತದೆ. ಇವರ ಬಗೆಗಿನ ಹಲವು ಕಲ್ಪನೆಗಳು ಜನರ ವಿಶಿಷ್ಟ ಮನೋಭಾವವನ್ನು ತಿಳಿಸುತ್ತದೆ. ಹೀಗೆ ಇಂದಿನ ಆಚರಣೆಯ ವಿವರಗಳನ್ನು ಪರಿಶಿಲಿಸಿದರೆ ಅವು ಸಾಂಪ್ರದಾಯಕವಾಗಿ ಮತ್ತು ಅನುಭಾವವಾಗಿ ಬಹು ಹಿಂದಿನಿಂದಲೂ ಅಂದರೆ ಪಾಳೇಗಾರರ ಕಾಲದಿಂದಲೂ ನಡೆದುಕೊಂಡು ಬಂದಿರಬಹುದೆಂದು ಊಹಿಸಬಹುದಾಗಿದೆ. ಇಲ್ಲಿನ ಪಾಳೇಗಾರರು ಶಿಷ್ಟ ಸಂಪ್ರದಾಯವನ್ನು ಬಿಡದೇ ಜಾನಪದ ಬದುಕಿಗೆ ಹತ್ತಿರವಾದ ಸಂಸ್ಕೃತಿಯನ್ನು ಪೋಷಿಸಿ ಬೆಳೆಸಿದರು. ಇದರಿಂದ ಸಾಮಾನ್ಯ ಜನರ ಸಂಘಟನೆ ಅವರಿಗೆ ಸಾಧ್ಯವಾಯಿತು. ಅನೇಕ ಜಾನಪದ ಸಂಸ್ಕೃತಿಯ ಆಚರಣೆ ಪ್ರಕಾರಗಳು ಉಳಿದುಬರುವುದಕ್ಕೆ ಇವರು ಕಾರಣರಾಗಿದ್ದಾರೆ. ಅದೇ ದಿನ ಅಂದರೆ ಗುರುವಾರ ರಾತ್ರಿ ಹತ್ತು ಘಂಟೆಗೆ ವಿಜೃಂಭಣೆಯಿಂದ ಎಲ್ಲ ವಿಧಿವಿಧಾನದ ಕಾರ್ಯಗಳನ್ನು ಮಾಡಿದ ನಂತರ ರಥೋತ್ಸವವನ್ನು ಎಳೆಯುವರು. ಮುಂದಿನ ಮಂಗಳವಾರ ಊರಿನ ಪಟ್ಟದ ಕೋಣವನ್ನು ಬಿಡುವುದು ಈ ಕಾರ್ಯದಲ್ಲಿ ಕೆಲವರು ತಮ್ಮ ಹರಕೆ ರೂಪದಲ್ಲಿ ಕೋಣವನ್ನು ನೀಡುತ್ತಾರೆ.

## ಅಡಿಟಿಪ್ಪಣಿ

೧ ಚಿದಾನಂದಮೂರ್ತಿ ಎಂ., ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪುಟ-೪೩೦-೪೩೧.
೨ ಗಿರಿಜಾ ಟಿ., ಚಿತ್ರದುರ್ಗ ಜಿಲ್ಲಾದರ್ಶಿನಿ, ಪುಟ-೩೫೭.
೩ ಅದೇ, ಪುಟ-೩೫೮.
೪ ಅದೇ, ಪುಟ-೩೫೮.
೫ ತಿಪ್ಪೇಸ್ವಾಮಿ ಎಚ್., ಕರ್ನಾಟಕ ಸಾಂಸ್ಕೃತಿಕ ಸಮೀಕ್ಷೆ ,ಪುಟ-೧೨-೧೫.
೬ ಮಂಜುನಾಥ ಬೇವಿನಕಟ್ಟಿ ಕನ್ನಡ ಜನಪದ ನಂಬಿಕೆಗಳು ಪುಟ-೧೩೨
೭ ಸಂತೋಷ ಚೊಕ್ಕಾಡಿ ,ಕೃಷಿ ನಂಬಿಕೆಗಳು, ಪುಟ-೩೯.
೮ ರಾಜೇಂದ್ರ ಡಿ.ಆರ್., ಜನಪದ ಸಮನ್ವಯ, ಪುಟ-೨೭-೩೧.
೯ ಸಿದ್ಧಲಿಂಗಯ್ಯ ,ಗ್ರಾಮದೇವತೆಗಳ ಮೂಲ, ಪುಟ-೧೫.
೧೦ ಎಸ್.ಎಸ್. ಹಿರೇಮಠ, ಕರ್ನಾಟಕ ಸಂಸ್ಕೃತಿ ಪರಂಪರೆ, ಭಾಗ-೧ ಪುಟ-೦೨.
೧೧ ಜವರೇಗೌಡ ದೇ, ಜನಪದಮಹಾ ಸಂಪುಟ, ಪುಟ-೨೬೦.
೧೨ ಭಟ್ ಎ.ಎನ್, ಭಾರತೀಯ ಹಬ್ಬಗಳ ವೈಶಿಷ್ಟ್ಯ, ಪುಟ-೦೧.
೧೩ ಹೊರೆಯಾಲ ದೊರೆಸ್ವಾಮಿ, ಕಾಗಿನೆಲೆ, ಪುಟ-೮೨.
೧೪ ವೇದಾವತಿ ,ಕಣೆಕಟ್ಟೆ ಪರಿಸರದ ಸಾಂಸ್ಕೃತಿಕ ಅಧ್ಯಯನ, ಪುಟ-೧೧೨.
೧೫ ಹೊರೆಯಾಲ ದೊರೆಸ್ವಾಮಿ ,ಕಾಗಿನೆಲೆ ,ಪುಟ-೮೨.
೧೬ ಅದೇ, ಪುಟ-೮೪.
೧೭ ರಂಗಸ್ವಾಮಿ ಡಿ.ಟಿ., ಭಾರತದ ಹಬ್ಬಗಳು, ಪುಟ-೭೩.
೧೮ ಅದೇ, ಪುಟ-೮೮.
೧೯ ರಮೇಶ ಸ.ಚಿ, ಕರ್ನಾಟಕದ ಜನಪದ ಆಚರಣೆಗಳು, ಪುಟ-೨೨೮.
೨೦ ಬಸವರಾಜಯ್ಯ ಎಂ., ಶಿರುಗುಪ್ಪ, ೨೦೧೩,ಮೊಹರಂಗೆ ಭಾವೈಕ್ಯದ ಬೆಸುಗೆ,ಪ್ರಜಾವಾಣಿ ವರದಿ.
೨೧ ಜಗದೀಶ ಡಿ., ಹಿರಿಯೂರು ಪಟ್ಟಣದ ಚಾರಿತ್ರಿಕ ಅಧ್ಯಯನ, ಪುಟ-೯೨.
೨೨ ರಂಗಸ್ವಾಮಿ ಡಿ.ಟಿ., ಭಾರತದ ಹಬ್ಬಗಳು, ಪುಟ-೧೪೯.
೨೩ ಹಂಪ ನಾಗರಾಜಯ್ಯ, ಕರ್ನಾಟಕದ ಜಾತ್ರೆಗಳು, ಪುಟ-೧೩.
೨೪ ಜಗನ್ನಾಥ ಹೆಬ್ಬಾಳ, ಜಾತ್ರೆಗಳು, ಪುಟ-೨೩.
೨೫ ಚಪುರ ಬಂಧ, ಬಿಜಾಪುರ ಜಿಲ್ಲೆಯ ಜಾತ್ರಾ ಉತ್ಸವಗಳು, ಪುಟ-೩೪.
೨೬ ತಿಪ್ಪೇರುದ್ರಸ್ವಾಮಿ ಎಚ್. ,ಕರ್ನಾಟಕ ಸಂಸ್ಕೃತಿಯ ಸಮೀಕ್ಷೆ, ಪುಟ-೧೨೬-೧೨೮.

## ಅಧ್ಯಾಯ-ಏಳು
## ಸಮಾರೋಪ

ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು ಒಂದು ನಾಡಿನ ಒಂದು ಗ್ರಾಮದ ಸಂಸ್ಕೃತಿಯನ್ನು ಪುನರ್‌ನಿರ್ಮಾಣಗೊಳಿಸುವಲ್ಲಿ ಮೂಲ ಆಕರಗಳ ಪಾತ್ರ ಅತಿ ಮುಖ್ಯವಾದ್ದುದಾಗಿವೆ. ಅಂತವುಗಳಲ್ಲಿ ಶಾಸನಗಳು, ದೇವಾಲಯಗಳು, ಕೋಟೆಕೊತ್ತಲುಗಳು, ಕೆರೆಬಾವಿಗಳು, ಆಚರಣೆ ಮತ್ತು ಸಂಪ್ರದಾಯಗಳು ಅಂದಿನ ರಾಜಕೀಯ, ಧಾರ್ಮಿಕ, ಆರ್ಥಿಕ, ಸಾಮಾಜಿಕ ವಿಷಯಗಳ ಅಧ್ಯಯನ ಮಾಡಲಿಕ್ಕೆ ತುಂಬಾ ಸಹಾಯಕವಾಗುತ್ತವೆ. ಈ ದೃಷ್ಟಿಕೊನವನ್ನು ಇಟ್ಟುಕೊಂಡು ಕಾನಾಹೊಸಹಳ್ಳಿ ಗ್ರಾಮದ ಪರಿಸರಕ್ಕೆ ತಕ್ಕಂತೆ ಕ್ಷೇತ್ರಕಾರ್ಯ ಕೈಗೊಂಡಿದ್ದು, ಜೊತೆಗೆ ಕಾನಾಹೊಸಹಳ್ಳಿಯ ಭೌಗೋಳಿಕ ಹಿನ್ನೆಲೆಯ ವೈವಿಧ್ಯಮಯ, ಭೂಸ್ವರೂಪ, ಶುಷ್ಕವಾಯುಗುಣ ಜಿಲ್ಲೆಯಲ್ಲಿಯೇ ಅತಿ ಹೆಚ್ಚು ಕಾಯ್ದಿಟ್ಟ ಅರಣ್ಯ ಹೊಂದಿದ ತಾಲೂಕು ಇದಾಗಿದ್ದು ಇಲ್ಲಿನ ಭೂಮಿಯು ಮುಂಗಾರು ಮಳೆಯನ್ನೆ ಅವಲಂಬಿಸಿದೆ. ಕಾನಾಹೊಸಹಳ್ಳಿ ಗ್ರಾಮದಲ್ಲಿ ೯೦೦೦ಕ್ಕೂ ಮೇಲ್ಪಟ್ಟು ಜನಸಂಖ್ಯೆ ಇದ್ದು. ಅದರಲ್ಲಿ ನೇಕಾರ ಜನಾಂಗವೇ ಅಧಿಕವಾಗಿದೆ. ಈ ಗ್ರಾಮದಲ್ಲಿ ಕಂಡುಬರುವ ನಾಡಕಛೇರಿ, ಪೋಲಿಸ್‌ಠಾಣೆ, ಗ್ರಂಥಾಲಯ, ಸಾರ್ವಜನಿಕ ಆಸ್ಪತ್ರೆ, ಮಳೆಮಾಪನ ಕೇಂದ್ರ, ಬ್ಯಾಂಕ್, ಪ್ರಾಥಮಿಕ ಶಾಲೆಯಿಂದ ಪದವಿ ಹಂತದವರೆಗೆ ಸರ್ಕಾರಿ ಮತ್ತು ಖಾಸಗಿ ಶಾಲಾ ಕಾಲೇಜುಗಳಿವೆ. ಇಲ್ಲಿನ ಪರಿಸರವು ಬೆಟ್ಟಗುಡ್ಡ, ಅರಣ್ಯಪ್ರದೇಶವಾಗಿದ್ದು ಮಳೆಯಾಶ್ರಿತ ಭೂಮಿಯಾಗಿದೆ. ಭೌಗೋಳಿಕತೆಗೆ ಅನುಗುಣವಾಗಿ ಹಲವಾರು ಜಾತಿಯ ಮರಗಿಡಗಳು, ಕುರುಚಲು ಕಾಡು ಕಂಡುಬರುತ್ತದೆ. ಈ ಗ್ರಾಮದ ಪಕ್ಕದಲ್ಲಿ ಚಿನ್ನಹಗರಿ ಹಳ್ಳ ಹರಿಯುತ್ತದೆ. ಇವುಗಳನ್ನು ಬಿಟ್ಟರೆ ಯಾವುದೇ ನದಿಪಾತ್ರದ ವ್ಯವಸ್ಥೆಯಿಲ್ಲ. ಹಳ್ಳಕೊಳ್ಳಗಳೆ ಹಳ್ಳಿಗಳ ಜೀವನಾಧರವಾಗಿವೆ. ಇಲ್ಲಿ ಏಕದಳ, ದ್ವಿದಳ, ಧಾನ್ಯಗಳು ಆಹಾರ ಬೆಳೆಗಾಳಗಿದ್ದು ಇವುಗಳನ್ನೇ ಅವಲಂಬಿಸಿದ್ದಾರೆ. ಈ ಅಧ್ಯಯನದ ಕೇಂದ್ರಬಿಂದುವಾಗಿ ಆರಂಭವಾಗುವ ಕಾನಾ, ಕಾನನ (ಅಡವಿ) ಮುಂತಾದ ಅರ್ಥಗಳಿಂದ ಒಳಗೊಂಡ ಪದವಾಗಿದೆ. ಅಲ್ಲದೆ ಕಾನಾಹೊಸಹಳ್ಳಿ ಪರಿಸರದಲ್ಲಿ ಕಂಡುಬರುವ ಅಕ್ಕಪಕ್ಕದ ಗ್ರಾಮಗಳನ್ನು ಆದಿಮಾನವನ ನೆಲೆಗಳೆಂದು ಗುರುತಿಸಿದ್ದಾರೆ. ಹಲವು ಸಂಶೋಧಕರು ಇಂತಹ ಗ್ರಾಮಗಳ ಕುರಿತು ಪ್ರಾಗಿತೀಹಾಸದ ವಿಷಯ ಹೊರತಂದಿದ್ದಾರೆ.

**ಉದಾಹರಣೆಗೆ** ಕುಮತಿ, ಜುಮ್ಮೋಬನಹಳ್ಳಿ, ಕಲ್ಲಹಳ್ಳಿ ಮುಂತಾದವು. ಅದಕ್ಕೆ ಅನುಗುಣವಾಗಿ ಭಾರತದ ಮೊದಲ ಅರಸು ಮನೆತನ ಯಾದ ಮೌರ್ಯರ ಆಡಳಿತಕ್ಕೆ ಕೂಡ್ಲಿಗಿ ತಾಲೂಕೂ ಒಳಪಟ್ಟಿತು ಎಂಬುದು ಕೆಲವು ದಾಖಲೆಗಳಿಂದ ತಿಳಿದುಬರುತ್ತದೆ. ಮೌರ್ಯರ ಉತ್ತರಾಧಿಕಾರಿಗಳಾದ ಶಾತವಾಹನರು, ಕಂದಬರ ದಾಖಲೆಯು ಸಹ ಚಾರಿತ್ರಿಕ ದೃಷ್ಟಿಯಿಂದ ಗಮನಾರ್ಹ ಸಂಗತಿಯಾಗಿದೆ. ನಂತರ ಕದಂಬರಿಂದ ಹಿಡಿದು ವಿಜಯನಗರದರಸರು ಪಾಳೆಗಾರರವರೆಗೆ ಅವರ ಆಳ್ವಿಕೆಗೆ ಒಳಪಟ್ಟಿತು ಎಂಬುದು ಶಾಸನಗಳಿಂದ, ಇತಿಹಾಸದ ಆಧಾರಗಳಿಂಧ ತಿಳಿದು ಬರುತ್ತದೆ. ಕೂಡ್ಲಿಗಿ ತಾಲೂಕು ಹೆಚ್ಚು ಗುರುತಿಸಲ್ಪಟ್ಟಿದ್ದು ವಿಜಯನಗರ ಮತ್ತು ಪಾಳೆಗಾರರ ಆಳ್ವಿಕೆಯಲ್ಲಿ ಈ ಭಾಗ ಆ ಸಮಯದಲ್ಲಿ ರಾಜಕೀಯ ದೃಷ್ಟಿಯಿಂದ ಮಾನ್ಯತೆಗಳಿಸಿತ್ತು. ಕೂಡ್ಲಿಗಿ ತಾಲೂಕು ಮೂಲನೆಲೆಯಲ್ಲಿ ಒಂದು ಬೇಡಸಮುದಾಯದ ಹಟ್ಟಿಯಾಗಿದ್ದು, ಇಲ್ಲಿನ ಜನ ಬೇಟೆ, ಕೃಷಿ, ಪಶುಪಾಲನೆ, ಬದುಕನ್ನೆ ರೂಢಿಯಾಗಿಸಿಕೊಂಡು ಕಾಲಗತಿಯಲ್ಲಿ ಪರಿವರ್ತನೆ ಇಲ್ಲದ್ದಾಗಿ ಅಳಾರಸರ ನಿರ್ಲಕ್ಷ್ಯಕ್ಕೆ ಒಳಗಾಗಿರಬಹುದು. ಆದರೆ ಕಟ್ಟುಮಸ್ತಿನ ದೇಹಸಿರಿ, ಬೇಟೆಗಾಗಿ ಹೋರಾಡುವ ದಿಟ್ಟತನ ಕಂಡು ಕುಮ್ಮಟದುರ್ಗದ ಅರಸರು ಇವರು ಹೋರಾಟಕ್ಕೆ ಹೇಳಿಮಾಡಿಸಿದಂತೆ ಕಂಡುದರಿಂದ ತಮ್ಮ ಸೇನೆಗಳಲ್ಲಿ ಸೈನಿಕರಾಗಿಸಿಕೊಂಡು ಈ ಪ್ರದೇಶದ ಕಡೆ ಗಮನಹರಿಸಿದ ಕಾರಣ ಈ ಭಾಗದ ಜನ ಬದಲಾವಣೆ

ಕಂಡಿರಬಹುದು. ಕಾನಾಹೊಸಹಳ್ಳಿ ಪರಿಸರಕ್ಕೆ ಒಳಗೊಂಡಂತೆ ವಿಜಯನಗರದ ಅರಸರ ಆಳ್ವಿಕೆ ನಂತರ ಪಾಳೆಗಾರರು ಸ್ವತಂತ್ರವಾಗಿ ಕೂಡ್ಲಿಗಿ ತಾಲ್ಲೂಕಿನ ಮೇಲೆ ತಮ್ಮ ಹಿಡಿತ ಸಾಧಿಸಿದ ಅಂಶಗಳು ಚಾರಿತ್ರಿಕ ಅಧ್ಯಯನದಿಂದ ತಿಳಿದುಬರುತ್ತವೆ. ಅದಕ್ಕೆ ಸಾಕ್ಷಿಗಳೆನ್ನುವಂತೆ ಇವರ ಕಾಲದಲ್ಲಿ ನಿರ್ಮಾಣವಾದ ದೇವಾಲಯಗಳು ಕೋಟೆ-ಕೊತ್ತಲಗಳು ಒಂದೆರಡು ಶಾಸನಗಳು ಇದಕ್ಕೆ ಪುಷ್ಟಿನೀಡುತ್ತವೆ. ತದ ನಂತರ ಇವರ ಮೇಲೆ ಸವಾರಿ ಮಾಡಿದ ದುರ್ಗದ ಪಾಳೆಗಾರರು ಟಿಪ್ಪು, ನಿಜಾಮ್ ದಾಳಿ ಮಾಡಿ ಹದಿನೆಂಟನೇ ಶತಮಾನದ ಹೊತ್ತಿಗೆ ಪ್ರಬಲಗೊಂಡ ಬ್ರಿಟೀಷರಿಗೆ ಶರಣಗಾಬೇಕಾಗಿ ಬಂದು ತಾವು ಆಕ್ರಮಿಸಿದ್ದ ಕೆಲ ಪ್ರದೇಶಗಳನ್ನು ಇವರ ಪಾರುಪತ್ಯಕ್ಕೆ ಬಿಟ್ಟುಕೊಟ್ಟ ಸಂಗತಿ ಇತಿಹಾಸ ಪುಟಗಳಲ್ಲಿ ದಖಲಾಗಿವೆ. ಇನ್ನು ಕಾನಾಹೊಸಹಳ್ಳಿ ಗ್ರಾಮದ ಕೆಲವು ಸ್ಥಳನಾಮ, ಪುರಾಣ, ಐತಿಹ್ಯಗಳು ಇವುಗಳ ಅಭ್ಯಾಸವು ನಮಗೆ ನೆರವಾಗುತ್ತವೆ. ಸಾಮಾನ್ಯವಾಗಿ ಸಸ್ಯವಾಚಿ, ಜಲವಾಚಿ, ವ್ಯಕ್ತಿವಾಚಿ ಮುಂತಾದ ಅಂಶದಡಿಯಲ್ಲಿ ಗ್ರಾಮಗಳ ಹೆಸರು ಮೂಡಿಬಂದಿದ್ದು ಕೆಲವು ಪೌರಣಿಕ ಹಿನ್ನೆಲೆಯಿಂದ ಇನ್ನು ಕೆಲವು ಐತಿಹ್ಯಗಳಿಂದ ಕಂಡು ಬಂದಿವೆ ಎಂಬ ಅಭಿಪ್ರಾಯ ವ್ಯಕ್ತವಾಗುತ್ತದೆ.

ವಾಸ್ತು ಕುರಿತಾದ ಹಿನ್ನೆಲೆಯಲ್ಲಿ ಕಾನಾಹೊಸಹಳ್ಳಿ ಗ್ರಾಮವನ್ನು ನೋಡುವುದಾದರೆ, ದೇವಾಲಯಗಳು ಮೊದಲಾಗಿ ತೆರೆದುಕೊಳ್ಳುತ್ತದೆ. ಈ ಗ್ರಾಮದಲ್ಲಿ ಶೈವ, ವೈಷ್ಣವ ಪಂಥಗಳು ಶತಮಾನಗಳಿಂದ ಕಂಡು ಬಂದರು ಹೇಳಿಕೊಳ್ಳುವಂತಹ ವಾಸ್ತು ಪ್ರಕಾರದ ವೈಷ್ಣವ ದೇವಾಲಯಗಳು ಈ ಭಾಗದಲ್ಲಿ ಅಷ್ಟೇನು ಕಂಡುಬರುವುದಿಲ್ಲ. ಹೆಚ್ಚು ಬುಡಕಟ್ಟಿನ ಸಮುದಾಯಗಳೇ ವಾಸಿಸುವ ಪರಿಸರವಾಗಿರುವುದರಿಂದ ಶಕ್ತಿ ಆರಾಧನೆಯು ಗ್ರಾಮದೇವತೆಯ, ಮಾತೃದೇವತೆಯ ರೂಪದಲ್ಲಿ ಪ್ರತಿಗ್ರಾಮದಲ್ಲಿ ಗೋಚರಿಸುತ್ತವೆ. ಅವು ಮಾರಮ್ಮ, ದುರ್ಗಮ್ಮ, ಉಡಸಲಮ್ಮ, ಮಲಿಯಮ್ಮ ಮುಂತಾದ ಹೆಸರಿನಿಂದ ಪೂಜಿಸಲಾಗುತ್ತದೆ. ಜೊತೆಗೆ ಹನುಮಂತನಿಲ್ಲದ ಊರುಗಳೇ ಇಲ್ಲ ಎನ್ನಬಹುದು ಗ್ರಾಮದಲ್ಲಿ ಜನ ಕಟ್ಟು ಸಂಪ್ರದಾಯ, ಮೂಲಪದ್ಧತಿ, ಬಲಿ ಆಚರಣೆ, ರೂಢಿಸಿಕೊಂಡಿದ್ದು ಪ್ರತಿವರ್ಷವು ಜಾತ್ರೆ, ಬಲಿ, ಆಚರಣೆ ಸಾಮಾನ್ಯ. ಹಾಗೇ ಶಿಷ್ಟದೇವತೆಗಳಾದ ಬಸವಣ್ಣ, ಶಿವ, ವಿಷ್ಣು, ಗಣಪತಿಯ ಆರಾಧನೆ ಕೂಡ ಇದೆ. ವಾಸ್ತುವಿಚಾರವಾಗಿ ದೇವಾಲಯ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಅರಿವಿಗೆ ಮೂಲವಾಗಿ ಮಠ, ಶಿಕ್ಷಣಸಂಸ್ಥೆ, ನ್ಯಾಯಾಲಯವಾಗಿ ಆಧ್ಯಾತ್ಮಿಕ ಚಿಂತನ ಮಂಟಪವಾಗಿ ಗ್ರಾಮದ ಪರಿಸರದಲ್ಲಿ ಅನೇಕ ದೇವಾಲಯ ನಿರ್ಮಾಣಗೊಂಡು ಸಂಸ್ಕೃತಿಯ ಸಿದ್ಧತೆಗೆ ಸಹಕರಿಸಿವೆ. ಈ ಪ್ರಪಂಚದಲ್ಲಿ ಕಲ್ಯಾಣ ಚಾಲ್ಯುಕ್ಯರಿಂದ ಹಿಡಿದು ಪಾಳೆಗಾರರ ಕಾಲದವರೆಗೂ ದೇವಾಲಯಗಳ ನಿರ್ಮಾಣವನ್ನು ಕಾಣಬಹುದು. ಅಂತಹವುಗಳನ್ನು ಈಗಾಗಲೇ ಗುರುತಿಸಿ ಅಧ್ಯಯನ ಮಾಡಿ ಪರಿಚಯಿಸಲಾಗಿದೆ. ಅಲ್ಲದೇ ಕೆಲವು ಗುರುತಿಸದೇ ಇರುವ ಪ್ರಾಗಿತೀಹಾಸಿಕ ಅವಶೇಷಗಳನ್ನು ಹೊಸದಾಗಿ ಗುರುತಿಸಿ ಅವುಗಳನ್ನು ಪರಿಚಯಿಸಿದ್ದೇನೆ. ಹಾಗೂ ಈ ಹಿಂದೆ ಗುರುತಿಸಿದ ದೇವಾಲಯಗಳ ಮಾಹಿತಿಯನ್ನು ಇಲ್ಲಿ ಪ್ರಸ್ತುತಪಡಿಸಿ ಅವುಗಳ ನಿರ್ಮಾಣ, ರಚನೆ, ಶೈಲಿ, ದಿಕ್ಕು, ಕಾಲಮಾನ, ಸ್ಥಳ, ದೇವಾಲಯಗಳ ಹೆಸರುಗಳ ವಿವರವನ್ನು ನೀಡಲಾಗಿದೆ. ಈ ಗ್ರಾಮದ ಪರಿಸರದಲ್ಲಿ ಒಂದು ವೀರಗಲ್ಲು ಹಾಗೂ ಪಕ್ಕದ ಗ್ರಾಮವಾದ ಕಾನಾಮಡುಗುವಿನಲ್ಲಿ ಮಹಾಸತಿಗಲ್ಲು ಕಂಡುಬಂದಿದ್ದು ಅವುಗಳಲ್ಲಿ ವೀರಗಲ್ಲು ಏಕ ಹಂತದ, ದ್ವಿ ಹಂತದ, ಮೂರು ಹಂತದ ವೀರಗಲ್ಲುಗಳು ಕಂಡುಬರುತ್ತವೆ ಅವುಗಳನ್ನು ವ್ಯವಸ್ಥಿತವಾಗಿ ಅಭ್ಯಾಸಿಸಲಾಗಿದೆ. ಕೋಟೆಗಳು ಲೌಕಿಕ ವಾಸ್ತುಗಳಲ್ಲಿ ಪ್ರಮುಕಖವಾದವು. ಕಾನಾಹೊಸಹಳ್ಳಿ ಗ್ರಾಮದಲ್ಲಿ ಹಿಂದೆ ಒಂದು ಕೋಟೆಯಿದ್ದು ಅದನ್ನು ನವೀಕರಿಸಲಾಗುತ್ತಿರುವುದು ಕಂಡುಬಂದಿದೆ. ಗ್ರಾಮಗಳ ಅಭಿವೃದ್ಧಿಯಲ್ಲಿ ಅವುಗಳ ಬೆಳವಣಿಗೆಯಲ್ಲಿ ಕೆರೆಬಾವಿಗಳ ಪಾತ್ರ ಅತ್ಯಂತ ಮಹತ್ವದ್ದು. ಗ್ರಾಮದಲ್ಲಿ ನೀರಿನ ಆಶ್ರಯಕ್ಕೆ ಹಿಂದೆ ಕೆರೆಬಾವಿಗಳನ್ನು ಅವಲಂಬಿಸಿರುವುದರಿಂದ ಪ್ರಸ್ತುತ

ದಿನಮಾನಗಳಲ್ಲಿಯೂ ಇವುಗಳ ಅವಶ್ಯಕತೆಯಿದೆ. ಗ್ರಾಮದಲ್ಲಿ ಮಧ್ಯಮ ಗಾತ್ರದ ಒಂದು ಕೆರೆಯನ್ನು ಹೊಂದಿದ್ದು, ಸಾಂಸ್ಕೃತಿಕ ಅಧ್ಯಯನದಲ್ಲಿ ಆಚರಣೆಯಲ್ಲಿ ಇವುಗಳ ನಿರ್ವಾಹಣೆ ದೊಡ್ಡದು. ಅವರ ಬದುಕಿನ ಪೂಜೆ ಆಚರಣೆಗೆ ಬಲಿಗಳ ವಿಚಾರದಲ್ಲಿ ತುಂಬಾನೇ ವಿಶೇಷತೆಯನ್ನು ಹೊಂದಿದೆ. ದೇವರ ರೂಪದಲ್ಲಿ ಕೆರೆಗಳನ್ನು ಆರಾಧಿಸುತ್ತಾರೆ. ಕೆರೆಗಳಿಗೆ ಆದಿಮಾನವನಷ್ಟೇ ಹಿನ್ನೆಲೆಯಿದೆ ಎನ್ನಲಾಗುತ್ತಿದ್ದರು ಮೂರ್ತಿಶಿಲ್ಪದ ವಿಷಯದಲ್ಲಿ ಹೆಚ್ಚು ಆಂಜನೇಯನ ಮೂರ್ತಿಶಿಲ್ಪಗಳು ಗ್ರಾಮದ ಪರಿಸರದಲ್ಲಿ ತುಂಬಾ ಕಂಡು ಬಂದಿವೆ. ಹಾಗೂ ಸ್ತ್ರೀ ದೇವತೆ, ಬಸವಣ್ಣ, ಗಣಪನ ಮೂರ್ತಿಶಿಲ್ಪ ಅಲ್ಲಲ್ಲಿ ಕಂಡುಬರುತ್ತವೆ.

ಪ್ರಸ್ತುತ ಅಧ್ಯಯನದಲ್ಲಿ ಹಿಂದಿನಿಂದಲೂ ನಡೆದುಬಂದ, ಆಚರಿಸಿಕೊಂಡು ಹೋಗುವ ಅನೇಕ ನಂಬಿಕೆ, ಆಚರಣೆಗಳು, ಜಾತ್ರೆ, ಹಬ್ಬಹರಿದಿನಗಳು ಇಂದಿಗೂ ಪ್ರಸ್ತುತದಲ್ಲಿದೆ. ಉದಾಹರಣೆಗೆ ಮಾರಮ್ಮನ ಜಾತ್ರೆ, ಹೀಗೆ ಹಲವು ಗ್ರಾಮಗಳಲ್ಲಿ ಅಯಾ ಗ್ರಾಮದೇವತೆಗಳಿಗೆ ಸಂಬಂಧಿಸಿದ ಜಾತ್ರೆಗಳು ಜರುಗುತ್ತವೆ ವಿಶೇಷ ಆಚರಣೆಗಳಲ್ಲಿ ಗೌರಸಂದ್ರ ಮಾರಮ್ಮನ ಹಬ್ಬವನ್ನು ಪ್ರತಿಗ್ರಾಮದಲ್ಲಿ ಹಾಗೂ ಹೋಳಿಗೆ ಅಮ್ಮನನ್ನು ಪ್ರತಿಗ್ರಾಮದಲ್ಲಿ ಆಚರಿಸುವುದರಿಂದ ಅವುಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ. ಜೊತೆಗೆ ವಿವಾಹ ಕಾರ್ಯ, ಕೃಷಿ ಆಚರಣೆಗಳು, ಹಬ್ಬಗಳು ಅವುಗಳಲ್ಲಿ ಯುಗಾದಿ, ಶಿವರಾತ್ರಿ, ದೀಪಾವಳಿ, ಗಣೇಶ ಚತುರ್ಥಿ, ನಾಗರಪಂಚಮಿ, ದಸರ ಹಾಗೂ ಮುಸ್ಲಿಂ ಹಬ್ಬಗಳ ಕುರಿತಾದ ಆಚರಣೆ ವಿಧಿವಿಧಾನಗಳ ಪರಿಚಯ ಅವುಗಳಿಗೆ ಸಂಬಂಧಿಸಿದ ಅದಕ್ಕೆ ಅನುಗುಣವಾಗಿ ಸ್ಥಳಿಯರಿಂದ ಪಡೆದ ಮಾಹಿತಿ ವಿವರ ಶಾಸನ, ವೀರಗಲ್ಲು, ಕೋಟೆಗಳ ಕುರುಹು, ಚಿತ್ರ ಅಳವಡಿಕೆ ಹಾಗೂ ಪ್ರಾಗಿತಿಹಾಸ, ಚಾರಿತ್ರಿಕ, ಧಾರ್ಮಿಕ, ಹಬ್ಬ ಆಚರಣೆ, ನಂಬಿಕೆ ಕುರಿತು ಸೂಕ್ತ ಗ್ರಂಥಗಳನ್ನು ಅಭ್ಯಾಸಿಸಿ ವ್ಯವಸ್ಥಿತವಾಗಿ ಮಾಹಿತಿಯನ್ನು ನೀಡುವ ಕೆಲಸವನ್ನು ಗ್ರಾಮದ ಬಗ್ಗೆ ಪ್ರಪ್ರಥಮ ಬಾರಿಗೆ ಮಾಡಲಾಗಿದೆ.

ಇದೊಂದು ಸಂಶೋಧನ ವಿಷಯವಾಗಿ ಸಮರ್ಥನೆಗಾಗಿ ತನ್ನಿಂದ ಸಾಧ್ಯವಾದಷ್ಟು ಒಂದು ವರ್ಷದ ಅಭ್ಯಾಸದ ಅಧ್ಯಯನದ ಅವಧಿಯಲ್ಲಿ ವಸ್ತುನಿಷ್ಠವಾಗಿ, ವಿಷಯಕ್ಕನುಗುಣವಾಗಿ, ಪ್ರಯತ್ನಿಸಿದ್ದೇನೆ. ಹಾಗೂ ವಾಸ್ತುಶಿಲ್ಪ ದೇವಾಲಯ, ವೀರಗಲ್ಲು, ಕೆರೆಗಳ ಸಮಗ್ರವಾದ ಚಿತ್ರಣವನ್ನು ನೀಡಲಾಗಿದೆ. ಇಲ್ಲಿ ನೀಡಲಾದ ಎಲ್ಲ ಮಾಹಿತಿ ಸೂಕ್ತ ಮಾರ್ಗದರ್ಶನದ ಮುಖಾಂತರ ಕಾನಾಹೊಸಹಳ್ಳಿಯ ಸಮಗ್ರ ಚಿತ್ರಣ ನೀಡಲು ಒಂದು ಕಿರು ಪ್ರಯತ್ನ ನನ್ನಿಂದ ಮೂಡಿಬಂದಿದೆ. ಈ ಪ್ರಬಂಧದಲ್ಲಿ ಉಲ್ಲೇಖಿಸಿರುವ ಸ್ಥಳಗಳಿಗೆ ಭೇಟಿನೀಡಿ ಸ್ಥಳದಲ್ಲಿ ಅಧ್ಯಯನ ಕೈಗೊಂಡು ಇದಕ್ಕೆ ಪೂರಕವೆಂಬಂತೆ ಸ್ವತಃ ಅಭಿಪ್ರಾಯವನ್ನು ನೀಡುತ್ತಾ ನನ್ನ ಈ ಕಿರು ಪ್ರಬಂಧವನ್ನು ರಚಿಸಲಾಗಿದೆ. ಈ ಪ್ರಬಂದಕ್ಕೆ ಪೂರಕ ಆಕರಗಳಾದ ನಕಾಶೆ, ವಕ್ತೃವಿವರ, ದೇವಾಲಯದ ನೀಲನಕ್ಷೆ (ತಲ ನಕ್ಷೆ) ಛಾಯಚಿತ್ರ ಹಾಗೂ ಆಕಾರ ಗ್ರಂಥಗಳ ಪಟ್ಟಿಯನ್ನು ಒದಗಿಸಿದ್ದೇನೆ.

## ಗ್ರಂಥಋಣ

ಅಂಬಳಿಕೆ ಹಿರಿಯಣ್ಣ,(ಪ್ರ,ಸಂ), ೨೦೦೯: ಕರ್ನಾಟಕ ವಿಷಯ ವಿಶ್ವಕೋಶ,ಸಂಪುಟ-೪, ಇತಿಹಾಸ ಮತ್ತು ಪುರಾತತ್ವ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ ಮೈಸೂರು.

ಚಂದ್ರಶೇಖರಯ್ಯ ಬಿ.ಎಂ, ೧೯೮೭ : ಕೂಡ್ಲಿಗಿ ತಾಲ್ಲೂಕು ದರ್ಶನ, ಐಬಿಎಚ್ ಪ್ರಕಾಶನ ಬೆಂಗಳೂರು.

ಕೊಟ್ರೇಶ ಎಂ, ೨೦೧೧ : ಬಳ್ಳಾರಿ ಜಿಲ್ಲೆಯ ಕೋಟೆಗಳು,ಪ್ರಸರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ.

ಗುರುಮೂರ್ತಿ ಪೆಂಡರೂರು, ೨೦೦೬ : ಬಳ್ಳಾರಿ ಜಿಲ್ಲೆಯ ಸ್ಥಳನಾಮಗಳು,ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜ ಪೇಟೆ, ಬೆಂಗಳೂರು.

ನರಸಿಂಹಮೂರ್ತಿ ಎ.ವಿ, ೨೦೧೦ : ಕರ್ನಾಟಕ ಪುರಾತತ್ವ ಕೆಲವು ಅಧ್ಯಯನಗಳು, ಪ್ರಸಾರಾಂಗ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ ಮಾನಸ ಗಂಗೋತ್ರಿ, ಮೈಸೂರು.

ನಾಗಯ್ಯ ಜಿ.ಎಂ, ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ಅಧ್ಯಯನ

ಭೀಮಣ್ಣ ಗಜಾಪುರ, ೨೦೧೨: ಕನಸ್ಸುಗಳಿಗೆ ರೆಕ್ಕೆಕಟ್ಟಿದವರು, ಕಾವ್ಯ ಪ್ರಕಾಶನ, ಕೆ. ಗಜಾಪುರ

ಮಹದೇವ ಸಿ, (ಸಂ), ೨೦೧೧: ಕರ್ನಾಟಕ ಪುರಾತತ್ವ ಶೋಧ, ಶ್ರೀ ಲಕ್ಷ್ಮೀ ಪ್ರಕಾಶನ, ಶ್ರೀ ರಂಗಪಟ್ಟಣ.

ರವಿಕುಮಾರ್ ಎನ್.ಎಂ, ಮತ್ತು ವೃಷಬೇಂದ್ರಚಾರ್ ಎ, ೧೯೯೮: ಮುನ್ನೆಡೆಯಲ್ಲಿ ಕೂಡ್ಲಿಗಿ, ಹಿಮಾಂತ ಪ್ರಕಾಶನ, ಎಂ.ಬಿ ಅಯ್ಯನಹಳ್ಳಿ.

ಸುಂದರ ಅ, ೧೯೭೭: ಕರ್ನಾಟಕ ಚರಿತ್ರೆ ಸಂಪುಟ ೧, ಕನ್ನಡ ವಿಶ್ವವಿದ್ಯಾಲಯ ಹಂಪಿ ವಿದ್ಯಾರಣ್ಯ.

ಸೂರ್ಯನಾಥ್ ಕಾಮತ್, (ಪ್ರ.ಸಂ.), ೧೯೮೪: ಕರ್ನಾಟಕ ರಾಜ್ಯ ಗೆಜೆಟೀಯರ್ ಮೂರು ಸಂಪುಟಗಳು, ಕರ್ನಾಟಕ ಸರ್ಕಾರ, ಬೆಂಗಳೂರು.

ಶ್ರೀನಿವಾಸ್ ಎಲ್, ೨೦೧೦: ಹಂಪಿ ಪರಿಸರದ ಆದಿಮಾನವನ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ಶ್ರೀನಿವಾಸ ಪಾಡಿಗಾರ, ೧೯೭೮: ಪುರಾತತ್ವ ಶಾಸ್ತ್ರ ಪರಿಚಯ, ಚೈತನ್ಯ ಪ್ರಕಾಶನ, ಧಾರವಾಡ.

ಶಿವತಾರಕ್ ಕೆ.ಬಿ, ೨೦೦೧: ಕರ್ನಾಟಕ ಪುರಾತತ್ವ ನೆಲೆಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

ರಮೇಶ ನಾಯಕ (ಸಂ), ೨೦೦೭: ಕರ್ನಾಟಕ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನಗಳ ಮರು ಚಿಂತನೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

